

ಇನ್ನೇಕೆ ಯಮನ ಬಾದೆಗಳು
ಎನ್ನ ಜಿಹ್ವೆಯಲಿ ಹರಿನಾಮ ಇರಲು

ಪತಿತ ಪಾವನವೆಂಬ ನಾಮ ಅತಿ
ಹಿತದಿಂದ ಯತಿಗಳು ಸ್ತುತಿಸುವ ನಾಮ
ಕ್ರತುಕೋಟಿ ಪಲವಿ.ವ ನಾಮ ಸ
ದ್ಗತಿಗೆ ಸಾದನವಹ ಅತಿಶಯದ ನಾಮ

ಮುನ್ನೊಬ್ಬ ಪ್ರಹ್ಲಾದ ಸಾಕ್ಷಿ ಆ
ಕನ್ಯಾಶಿರೋಮಣಿ ದ್ರೌಪದಿ ಸಾಕ್ಷಿ
ಚೆಣ್ಣನೆಂದಜಾಮಿಳ ಸಾಕ್ಷಿ ದಿವ್ಯ
ಪುಣ್ಯಲೋಕವನಾಳ್ವ ಧ್ರುವರಾಯ ಸಾಕ್ಷಿ

ಹದಿನಾಲ್ಕು ಲೋಕವನಾಳ್ವ ಇವ
ಮದನಜನಕನಾಗಿ ಮುದದಿಂದ ಬಾಳ್ವ
ಪದುಮನಾಬನಾಗಿ ಇರುವ ನಮ್ಮ
ಸದರ ಪುರಂದರ ವಿಠಲನು ಕಾಯ್ವ

---ಶ್ರೀ ಪುರಂದರದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ
# ತಿರುಮಲೆ.





## ಜ್ಯೇಷ್ಠಾಭಿಷೇಕ ಮಹೋತ್ಸವ

12--6--92 ರಿಂದ 14--6--92 ವರೆಗೆ

| | |
|---|---|
| 10--6--92ಶುಕ್ರವಾರ | ವಜ್ರಕವಚ ಸಮರ್ಪಣೆ |
| 11--6--92ಶನಿವಾರ | ಮುತ್ತಿನ ಕವಚ ಸಮರ್ಪಣ |
| 12--6--92ಬಾನುವಾರ | ಸುವರ್ಣ ಕವಚ ಸಮರ್ಪಣೆ |

ತಾವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು

ಶ್ರೀ ಎಂ ವಿ ಎಸ್ ಪ್ರಸಾದ್, ಐ ಎ ಎಸ್

ಕಾರ್ಯನಿರ್ವಹಣಾಧಿಕಾರಿ

ತಿ ತಿ ದೇ ತಿರುಪತಿ

ಸಂಪಾದಕ

ಕೆ ಸುಬ್ಬಾರಾವ್ಬ ಎಂ ಎ

ಉಪಸಂಪಾದಕ

ಬಿ ಎಸ್ ಶ್ರೀನಿವಾಸನ್ ಎಂ ಎ

ಮುದ್ರಣ

ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು
ತಿರುಪತಿ

---

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

---

**ಬಿಡಿ ಪ್ರತಿ ೧--೦೦**

**ವಾರ್ಷಿಕ ಚಂದಾ ೧೨--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ ಸಂ||


**ಸಂಪುಟ ೨೩]** **ಜೂನ್ ೧೯೯೨** **[ಸಂಚಿಕೆ ೧**


# ವಿಷಯಸೂಚಿ


| | | |
|---|---|---|
| ಸಂಪಾದಕೀಯ | | 4 |
| ಶ್ರೀ ರಾಮಾನುಜಾಚಾರ್ಯರು | ಎಚ್ ಜ ರಾಮ್ಯೆಂಗಾರ್ | 5 |
| ಕೈವಾರದ ಕವಿಪ್ರತಿಭೆ | ಬ ನ ಗುಂಡೂರಾವ್ | 9 |
| ಹುಲಗಿನ ಮರಡಿ | ಬಿ ಕೆ ಪುಷ್ಪಲತಾಮೂರ್ತಿ | 13 |
| ದ್ರವಿಡೋಪನಿಷತ್ ಸಂಗ್ರಹ | ಕಂದಾಡೈ ಕೇಶವನ್ | 17 |
| ವಿಷ್ಣುವಲ್ಲಭೆ ತುಲಸಿ | -ವಿ ಕೆ ವಿಶ್ವೇಶ್ವರ | 25 |
| ನಾಲಾಯಿರ ದಿವ್ಯಪ್ರಬಂಧ | - ಹಾರೋಹಳ್ಳಿ ಪುಟ್ಟಸ್ವಾಮಿ | 29 |
| ದೇವತೆಗಳ ವಾಹನಗಳು | ರಘುಸುತ | 31 |
| ಕುಂಚಕಲಾಚಾರ್ಯ ರವಿವರ್ಮ | - ೧ ಗೋವಿಂದಾಚಾರ್ಯ | 34 |
| ವಾರ್ತಾಲಹರಿ | | 37 |


ಮುಖಚಿತ್ರ 23 ನೇ ವರ್ಷದಲ್ಲಿ ಸಪ್ತಗಿರಿ

ಒಳಗಡೆ (1) **ಬಾಲಾಜಿ ವಿಕಲಾಂಗ ಆಸ್ಪತ್ರೆಯಲ್ಲಿ ಪ್ರಧಾನಮಂತ್ರಿ ಶ್ರೀ ಪಿ ವಿ ನರಸಿಂಹರಾವ್ ಹಾಗೂ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಜನಾರ್ದನರೆಡ್ಡಿ ಮೊದಲಾದವರು.**

(2) **ತಿರುಪತಿಯಲ್ಲಿ ತಮಿಳು ಉಗಾದಿಯಂದು ನಡೆದ ಪಡಿ ಉತ್ಸವ**




ಸಪ್ತಗಿರಿ 22 ವರ್ಷಗಳು ಯಶಸ್ವಿಯಾಗಿ ನಡೆದು 23 ರಲ್ಲಿ ಕಾಲಿಡುತ್ತಿದೆ 1949 ರಲ್ಲಿ ತಿ ತಿ ದೇವಸ್ಥಾನಗಳ ಬುಲೆಟಿನ್ ಆಗಿ ಯಾತ್ರಿಕರಿಗ ಮಾರ್ಗದರ್ಶನ ನೀಡುವ ಸುದ್ದಿ ಸಂಗ್ರಹವಾಗಿ ಆರಂಬವಾದದ್ದು 1970 ರಲ್ಲಿ ಸಪ್ತಗಿರಿಯಾಗಿ ರೂಪಾಂತರ ಹೊಂದಿ ಸನಾತನ ದರ್ಮದ ಮೌಲ್ಯ ವಿಸ್ತರಣ ಪ್ರಸಾರದಲ್ಲಿ ತಿ ತಿ ದೇವಸ್ಥಾನಗಳ ಕೈಂಕರ್ಯವನ್ನು ಸಲ್ಲಿಸುವ ಉದ್ದೇಶ ಹೊಂದಿತು ಅಂದಿನಿಂದ ಇಂದಿನವರೆಗೆ ಹಲವಾರು ದಿಕ್ಕಿನಲ್ಲಿ ಯಾತ್ರಿಕರ ದರ್ಮಾಸಕ್ತರ ಸೇವೆಯನ್ನು ಸಲ್ಲಿಸುತ್ತ ಬಂದಿದೆ

ಈ ನಡುವಣಕಾಲದಲ್ಲಿ ಎಲ್ಲವೂ ಅತಿವೇಗವೊ, ನಿಲುಗಡೆ ರಹಿತವೊ ಎಂಬಂತೇನೂ ನಡೆದಿಲ್ಲ ಅಲ್ಲಲ್ಲಿ ಆಗಾಗ ತಿ ತಿ ದೇವಸ್ಥಾನಗಳಲ್ಲಿ ಎದುರಾದ ಅನೇಕ ಇತರತ್ರ ಆಸಕ್ತಿಗಳಿಂದಾಗಿ ಪತ್ರಿಕೆ ನಿದಾನವಾಗಿದೆ ತಡವಾಗಿದೆಯೆಂದು ವಾಚಕರು, ಏಜಂಟರು ಆಗಾಗ ಬೊಬ್ಬೆ ಹಾಕಿ ಅಸಮದಾನವನ್ನು ಸೂಚಿಸಿಯೂ ಇದ್ದಾರೆ ಆದರೂ ತಡ ವಾಗಿ ಬಂದ ಮಗುವನ್ನು ಮನೆಯೊಳಗೆ ಸೇರಿಸಿಕೊಂಡು ಆದರಿಸಿದ್ದಾರೆ ಮನದೊಳಗ ಬರಮಾಡಿಕೊಂಡು ಆತ್ಮೀಯಗೊಳಿಸಿಕೊಂಡಿದ್ದಾರೆ ಅದಕ್ಕಾಗಿ ಪತ್ರಿಕೆ ಕೃತಜ್ಞತೆಗಳನ್ನು ಸೂಚಿಸಬೇಕಾದ್ದು ಪ್ರದಮ ಕರ್ತವ್ಯ

ಆಗಾಗ ಅವಗಡಗಳ ನಡುವಯೂ - ಮುದ್ರಣಾಲಯದ ಒತ್ತಡ, ಕಾಗದದ ಕೊರತೆ -- ಮೊದಲಾದುವುಗಳ ನಡುವೆಯೂ ತಿ ತಿ ದೇ ವ್ಯವಸ್ಥಾಪಕವರ್ಗ ಸಪ್ತಗಿರಿಯ ಬಗ್ಗೆ ಆಸಕ್ತಿ ಕಳೆದುಕೊಳ್ಳದೆ, ದಾರಿಯನ್ನು ಸುಗಮಗೊಳಿಸಲು ಪ್ರಯತ್ನಿಸುತ್ತ ಓದುಗರ ಅಬಿಮಾನಕ್ಕೆ ಪಾತ್ರವಾಗಿದೆ ಹಾಗಾಗಿ ವ್ಯವಸ್ಥೆಯ ಶ್ಲಾಘನೀಯವಾದ ದರ್ಮಾಸಕ್ತಿ, ಆದರಗಳನ್ನು ನೆನೆಯುತ್ತ ಮುಂದುವರೆಯುವುದು ಕರ್ತವ್ಯ ಈ ಆದರದ ಆಸಕ್ತಿಯ ಆಳ ಅಗಲಗಳು ವಿಸ್ತಾರವಾಗಲಿ ಎಂದು ಬಯಸುತ್ತದೆ ಸಪ್ತಗಿರಿ

23 ನೇ ವರ್ಷದಲ್ಲಿ ಕಾಲಿಡುತ್ತಿರುವ ಈ ಹೊತ್ತಿನಲ್ಲಿ ಈಗಿರುವ ಹಾಗೂ ಮುಂದೆ ನಡೆಯ ಬಹುದಾದ್ದನ್ನು ಒಮ್ಮೆ ನೋಡುವುದು ಉಚಿತ ಸಪ್ತಗಿರಿ ಈಗ ಹೊಸ ಯಂತ್ರಗಳ ಸಹಾಯದಿಂದ ಹೊಸ ವಿನ್ಯಾಸದಲ್ಲಿ ಮುದ್ರಿತವಾಗುತ್ತಿದೆ ಮುಂದೆ ಮುಂದೆ ಇನ್ನೂ ಸುಂದರ ತರವಾಗುವ ಅವಕಾಶಗಳಿವೆ ಒಳಹೂರಣದ ಬಗ್ಗೆ ಓದುಗರು, ತಿಳಿದವರು ಹೇಳಬೇಕು ಮಾನವೀಯ ಮೌಲ್ಯಗಳನ್ನು ಹರಡುತ್ತ ಸನಾತನ ದರ್ಮದ ಹಿರಿಮೆ ಗರಿಮೆಗಳನ್ನು ಸಾರುತ್ತ ತಿ ತಿ ದೇವಸ್ಥಾನಗಳ ಸುದ್ದಿಗಳನ್ನು ಯಾತ್ರಿಕರಿಗೆ ತಲಪಿಸುವ ಗುರಿಹೊತ್ತ ಪತ್ರಿಕೆ ಕೈಮರವಾಗಲಿ ದಾರಿದೀಪವಾಗಲಿ ಮಾರ್ಗದರ್ಶಿಯಾಗಲಿ ಎಂಬುದೇ ಹಾರೈಕೆ ಅದಕ್ಕೆ ಓದುಗರ ಸಹಕಾರ, ವ್ಯವಸ್ಥೆಯ ಬೆಂಬಲ - ಬೇಕು

ಎಲ್ಲಕ್ಕೂ ಮಿಗಿಲಾಗಿ ಆವನ ಅನುಗ್ರಹವಿರಬೇಕು ಸಪ್ತಗಿರಿ ಅವನದೇ ಆಗಿರುವುದರಿಂದ ಅದರ ಅಬಿವೃದ್ಧಿಯಲ್ಲೂ ಅವನೇ ಪ್ರದಾನಾಚಾರ್ಯ ಆಗಲಿ ಎಂದು ಬೇಡುತ್ತದೆ

-ಇತಿ ಶಂ



# ವಿಶಿಷ್ಟಾದ್ವೈತದ ವಿಶ್ವಾಚಾರ್ಯ ರಾಮಾನುಜ

*(1017 -- 1137)*

--ಹೆಚ್ ಜೆ ರಾಮಯ್ಯಂಗಾರ್

ಚೈತ್ರಾರ್ದ್ರಾಸಂಭವಂ
ವಿಷ್ಣೋರ್ದರ್ಶನ ಸ್ಥಾಪನೋತ್ಸುಕಂ
ತುಂಡೀರ ಮಂಡಲೇಶೇಷಮೂರ್ತಿಂ
ರಾಮಾನುಜಂ ಬಜೇ ||೧||

ಯೋನಿತ್ಯಮಚ್ಯುತ ಪದಾಂಬುಜ ಯುಗ್ಮರುಕ್ಮ
ವ್ಯಾಮೋಹತಸ್ತದಿತರಾಣ ತೃಣಾಯ ಮೇನೇ

ಅಸ್ಮದ್ಗುರೋರ್ಭಗವತೋಽಸ್ಯದಯೈಕ ಸಿಂದೋ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ || ೨

ಆಳ್ವಾರುಗಳ ಗೋಷ್ಠಿಯಲ್ಲಿ ಪ್ರಪನ್ನ ಜನಕೂಸ್ಥ ಎಂದು ಪ್ರಸಿದ್ಧರಾದ ನಮ್ಮಾಳ್ವಾರರಂತೆ, ಆಚಾರ್ಯರುಗಳ ಗೋಷ್ಠಿಯಲ್ಲಿ ಬಗವಾನ್ ಎನಿಸಿದ ರಾಮಾನುಜರು ಅಸಮಾನರಾಗಿ ಅಮೋಘವಾದ ಸ್ಥಾನವನ್ನು ಗಳಿಸಿದ್ದಾರೆ ತಮ್ಮ ಪೂರ್ವಾಚಾರ್ಯ ಪರಂಪರಾಪ್ರಾಪ್ತವಾದ ಅರ್ದ ವಿಶೇಷಗಳನ್ನು **ಸರಿ**ಯಾಗಿ ಗ್ರಹಿಸಿ, ಅವೆಲ್ಲವನ್ನೂ ಯದಾವ**ತ್ತಾಗಿ** ಅರ್ವಾಚೀನ ಆಚಾರ್ಯ ಪರಂಪರೆಗೆ ಉಪದೇ**ಶಿಸಿ** ಉಪಕರಿಸಿದ್ದಾರೆ

ಶ್ರೀಮನ್ನಾರಾಯಣನೇ ವ್ಯಾಸರಾಗಿ ಅವತರಿಸಿ ಸಂಸ್ಕೃತ ಭಾಷೆಯಲ್ಲಿ ಶಾರೀರಕ ಮೀಮಾಂಸೆ ಎಂಬ ಬ್ರಹ್ಮಸೂತ್ರಗಳನ್ನು ರಚಿಸಿದರು, ಅವರೇ ಆಮೇಲೆ ನಮ್ಮಾಳ್ವಾರರಾಗಿ ಬಂದು ಬ್ರಹ್ಮಸೂತ್ರಗಳನ್ನು ತಮಿಳು ಬಾಷೆಯಲ್ಲಿ ಸುಂದರವಾದ ಸೂಕ್ತಿಗಳಿಂದ ವಿವರಿಸಿದರು, ಕೊನೆಗೆ ಅವರೇ ರಾಮಾನುಜರಾಗಿಯೂ ಅವತರಿಸಿ ಸಂಸ್ಕೃತ - ತಮಿಳು ಎರಡೂ ಸುವಿಶದವಾಗಿ ಪ್ರಕಾಶವಾಗುವಂತೆ ಮಾಡಿ ಈ ಲೋಕದ ಜನತೆಯನ್ನು ಉದ್ಧರಿಸಿದರು

ವಿಷ್ಣುರೂಪವಾದ ವೇದವ್ಯಾಸರಿಂದ ಸೂತ್ರರೂಪದಲ್ಲಿ ಉಕ್ತವಾಗಿ, ಬೋದಾಯನ, ಟಂಕ, ದ್ರಮಿಡ, ಗುಹದೇವ, ನಾದಮುನಿ, ಯಾಮುನ ಮುಂತಾದ ಆಚಾರ್ಯರುಗಳಿಂದ ಸಂಗ್ರಹವಾಗಿ ವಿವೃತ್ತವಾದುದನ್ನು, ರಾಮಾನುಜರು ಸಂಗ್ರಹಿಸಿ, ಸಂಸ್ಕರಿಸಿ, **ಸ್ಥಿರೀ**ಕರಿಸಿ, ತಾರ್ಕಿಕವಾಗಿ ಸುವ್ಯವಸ್ಥಿತ ರೂಪದಲ್ಲಿ **ಪ್ರತಿ**ಪಾದಿಸಿ ಪ್ರಚಾರಮಾಡಿದರು

ಉಪನಿಷತ್ತುಗಳು, ವೇದಾಂತ ಅದವಾ ಬ್ರಹ್ಮ ಸೂತ್ರಗಳು, ಬಗವದ್ಗೀತೆ, ಪಾಂಚರಾತ್ರ ಮತ್ತು ವೈಖಾನಸ ಆಗಮ, ಆಳ್ವಾರುಗಳ ಪ್ರಬಂದ, ಪರಾಶರರ ವಿಷ್ಣುಪುರಾಣ -- ಇವು ರಾಮಾನುಜ ದರ್ಶನದ ಆದಾರಗಳು

ವಿಷ್ಣುಬಕ್ತಿಯು ಬಗವದ್ಗೀತಯಲ್ಲಿ ಆರಂಬವಾಗಿ, ಆಳ್ವಾರುಗಳ ದಿವ್ಯ ಪ್ರಬಂದದಲ್ಲಿ ಪ್ರವಹಿಸಿ, ರಾಮಾನುಜ ಸಿದ್ಧಾಂತದಲ್ಲಿ ಸ್ಥಿರವಾದ ಉಚ್ಚ ಸ್ಥಾನವನ್ನು ಪಡೆಯಿತು ಪ್ರವಾಹಗಳೆಲ್ಲವೂ ಜಲಾ**ಶಯದಲ್ಲಿ ಬಂದು ಐಕ್ಯವಾಗುವಂತೆ, ವೇದಗಳ**ಲ್ಲಿನ ವಿಷ್ಣು - ನಾರಾಯಣರ ಪೂಜೆ, ಬಾಗವತ ಸಂಪ್ರದಾಯ, ರಾಮಕೃಷ್ಣರ ಅವತಾರದ ಕದೆಗಳು, ವೈಷ್ಣವ ಆಗಮ, ಆಳ್ವಾರುಗಳು, ವಿಶಿಷ್ಟಾದ್ವೈತ ವೇದಾಂತ ಇವುಗಳಲ್ಲಿ ಕಾಣಬರುವ ಮೊದಲಿನ ಬಕ್ತಿಗಳೆಲ್ಲವೂ ತ್ಯಾಗಜೀವಿಯಾದ ರಾಮಾನುಜರಲ್ಲಿ ಬಂದು ಸೇರಿ, ಅಲ್ಲಿಂದ ಮತ್ತ ಬೇರೆ ಬೇರೆ ಕಾಲುವೆಗಳಾಗಿ ಒಡೆದು, ಹರಿದು ಬಕ್ತರನ್ನು ಉದ್ಧರಿಸಿವೆ ರಾಮಾನುಜರ ಸಗುಣೇಶ್ವರ ಬಾವನೆಯು ಹಾಗೂ ಚಿದಚಿದೀಶ್ವರ ಸಂಬಂದ ಸಿದ್ಧಾಂತವು, ಭಾವಪ್ರದಾನ ಜೀವಿಗಳಾದ ಭಾರತೀಯರಿಗೆ **ಹಾಗೂ ಭಾರತದ ಭಕ್ತಿಪಂದಕ್ಕೆ ಸ್ಫೂರ್ತಿಯನ್ನು**



ನೀಡಿ, ಇಲ್ಲಿನ ಕೋಟ್ಯಾಂತರ ಜೀವಿಗಳ ಮನಸ್ಸನ್ನು ತಣಿಸಿತು ಭಾರತೀಯ ಸಂತ ಶ್ರೇಷ್ಠರಲ್ಲಿ ರಾಮಾನುಜ ಪಂಪದಿಂದ ಪ್ರಭಾವಿತರಾದವರೇ

ಕಾಂಚೀಪುರದ ಬಳಿಯಲ್ಲಿ ಇರುವ ಭೂತಪುರಿ ಅದವಾ ಶ್ರೀ ಪೆರುಂಬೂರ್‌ನಲ್ಲಿ, ಆಸೂರಿ ಕೇಶವ ಸೋಮಯಾಜಿಗಳ ಮಗನಾದ ಕೇಶವ ಪೆರುಮಾಳ್ ಮತ್ತು ಶ್ರೀ ಶೈಲಪೂರ್ಣರ ಸೋದರಿ ಕಾಂತಿಮತಿ ಎಂಬ ವೈಷ್ಣವ ದಂಪತಿಗಳ ಮಗನಾಗಿ, ರಾಮಾನುಜರು ಜನಿಸಿದರು ಕೇಶವ ಪೆರುಮಾಳರು ದೊಡ್ಡ ವಿದ್ವಾಂಸರಾಗಿದ್ದು, ಯಜುರ್ವೇದದ ಶಿಕ್ಷಾ, ಶ್ರೌತಗಳ ವಿಷಯವಾಗಿ ಅನೇಕ ಪುಸ್ತಕಗಳನ್ನು ಬರೆದಿದ್ದು, ಅವು ಕೇಶವೀಯ ಎಂಬ ಹೆಸರಿನಿಂದ ಪ್ರಖ್ಯಾತವಾಗಿವೆ

ಹುಟ್ಟಿದ ಕೂಡಲೇ ಲಕ್ಷ್ಮಣ ಅದವಾ ರಾಮಾನುಜ ಎಂಬ ಹೆಸರನ್ನು ಇಟ್ಟ ಅವರ ಸೋದರಮಾವ ಶ್ರೀಶೈಲಪೂರ್ಣರು, ಇವರು ಶ್ರೀವೈಷ್ಣವ ಮತೋದ್ಧಾರಕನಾದ ಪ್ರವಾದಿ ಎಂದು ಅಬಿಪ್ರಾಯಪಟ್ಟರು

ರಾಮಾನುಜರ ಬಾಲ್ಯ ವಿದ್ಯಾಭ್ಯಾಸವು ತಂದೆಯ ಬಳಿಯಲ್ಲಿಯೇ ನಡೆಯಿತು ಜಟಿಲ ಸಮಸ್ಯೆ ಕಠಿಣ ರೀತಿಯ ಅರ್ಥಗರ್ಬಿತ ವಿಷಯಗಳನ್ನು ತಕ್ಷಣ ಚೆನ್ನಾಗಿ ಗ್ರಹಿಸಿ, ಅದನ್ನು ಎಲ್ಲರಿಗೂ ತಿಳಿಯುವಂತೆ ವಿವರಿಸುವ ಅದ್ಭುತ ಶಕ್ತಿ ಇವರಿಗೆ ಬಾಲ್ಯದಿಂದಲೂ ಇದ್ದಿತು ಸತ್ಸಂಗ ಹಾಗೂ ಸತ್ಕಥಾಕಾಲಕ್ಷೇಪಗಳಲ್ಲಿ ಸದಾ ಇರಲು ರಾಮಾನುಜರ ಮನಸ್ಸು ಇಷ್ಟಪಡುತ್ತಿದ್ದಿತು ಸಂತರು, ದೈವಭಕ್ತರು ಎಂದರೆ ಬಾಲಕ ರಾಮಾನುಜರಿಗೆ ಅತಿಯಾದ ಗೌರವ ಆದರಗಳಿದ್ದುವು. ಅಸಾಧಾರಣ ಬುದ್ಧಿಶಕ್ತಿ, ಸನ್ಮಾರ್ಗಪ್ರವೃತ್ತಿ, ಸದ್ವರ್ತನೆ, ವಿನಯ, ಶೀಲ ಇವೆಲ್ಲ ಇದ್ದ ರಾಮಾನುಜರು, ಮುಂದೆ ಉತ್ತಮ ದರ್ಶನ ಸ್ಥಾಪನಾಚಾರ್ಯರಾಗುವರು ಎಂಬುದನ್ನು ಸೂಚಿಸುತ್ತಿತ್ತು

ಕಂಚಿಯಿಂದ ತನ್ನ ಹುಟ್ಟೂರಾದ ಪೂನಾಮಲಿಗೆ ಶ್ರೀಪೆರುಂಬೂದೂರ್ ಮೂಲಕ ಹೋಗುತ್ತಿದ್ದ ಕಾಂಚೀಪೂರ್ಣರನ್ನು ಆಗಾಗ ನೋಡುತ್ತಿದ್ದ ರಾಮಾನುಜರಿಗೆ ಅವರ ವಿಷಯದಲ್ಲಿಯೂ, ಕಾಂಚೀಪೂರ್ಣರಿಗೆ ರಾಮಾನುಜರ ವಿಷಯದಲ್ಲಿಯೂ, ಗಾಢವಾದ ಪ್ರೀತಿ ವಿಶ್ವಾಸ ಬೆಳೆಯಿತು ರಾಮಾನುಜರ ಮನೆಯಲ್ಲಿ ಪರಸ್ಪರ ಭೇಟಿಯಾಗಿ ಭಗವದ್ವಿಷಯವನ್ನು ಕುರಿತು ಚರ್ಚೆ, ಚಿಂತನೆ ಮಾಡುತ್ತಿದ್ದರು

ರಾಮಾನುಜರಿಗೆ ಅವರ ಹದಿನಾರನಯ ವಯಸ್ಸಿನಲ್ಲಿ ಸತ್ಕುಲ ಪ್ರಸೂತೆ, ಗುಣವತಿ, ಅತಿ ಸುಂದರಿ, ಆದ ತಂಜಮಾಂಬಾಳ್ ಎಂಬ ವಧುವಿನೊಡನೆ ವಿವಾಹವಾಯಿತು ಅತ್ತೆ ಕಾಂತಿಮತಿಗೆ ಸೊಸೆಯು ತುಂಬಾ ಮೆಚ್ಚುಗೆಯಾಗಿದ್ದಳು ಆದರೆ ಕಲವೇ ದಿನಗಳಲ್ಲಿ ತಂದೆಯು ಮರಣ ಹೊಂದಿದ್ದರಿಂದ, ತಾಯಿ ಹಾಗೂ ಪತ್ನಿಯೊಡನೆ ಹೆಚಿನ ವಿದ್ಯಾಭ್ಯಾಸಕ್ಕಾಗಿ ವಿದ್ವಾಂಸರ ತವರೂರಾದ ಕಂಚಿಗೆ ಹೋದರು ಅಲ್ಲಿ ಚಿಕ್ಕಮ್ಮನ ಮಗ ಗೋ ಎಂದಬಟ್ಟನೊಡನೆ, ಕಾಂಚೀಪುರದ ಬಳಿಯ ತಿರುಪ್ಪುಟ್ಕುಳಿ ಎಂಬಲ್ಲಿದ್ದ ಪ್ರಸಿದ್ಧ ಅದ್ವೈತಿ ವಿದ್ವಾಂಸರಾದ ಯಾದವಪ್ರಕಾಶರಲ್ಲಿ, ಉನ್ನತ ವಿದ್ಯಾಭ್ಯಾಸವನ್ನು ಮಾಡತೊಡಗಿದರು ಬಹುಬೇಗ ರಾಮಾನುಜರು ಗುರುಗಳ ವಿಶ್ವಾಸ, ಆದರಗಳಿಗೆ ಪಾತ್ರರಾಗಿ ಅವರ ಮುಖ್ಯ ಶಿಷ್ಯರಲ್ಲಿ ಒಬ್ಬರಾದರು

ಶಾಸ್ತ್ರಾಭ್ಯಾಸಂಗದಲ್ಲಿ ಬಹುಬೇಗ ಉನ್ನತಿ ಪಡೆಯುತ್ತಿದ್ದ ರಾಮಾನುಜರನ್ನು ನೋಡುವ ಸಲುವಾಗಿ ಯಾಮುನರು ಶ್ರೀರಂಗದಿಂದ ಕಂಚಿಗೆ ಬಂದು, ಅವರನ್ನು ಅಲ್ಲಿನ ದೇವರಾಜಸ್ವಾಮಿಯ ಸನ್ನಿಧಿಯಲ್ಲಿ ನೋಡಿದರು

ತಮ್ಮ ಮನಸ್ಸಿನಲ್ಲಿ ಅವ್ಯಕ್ತವಾಗಿ ಅಡಗಿದ್ದ, ಹೊರಬರಲು ತವಕಿಸುತ್ತಿದ್ದ, ಆದರೆ ಮಾತುಗಳಲ್ಲಿ ಸರಿಯಾಗಿ ಮೂಡದಿದ್ದ, ಭಾವನೆಗಳೆಲ್ಲಾ ಸ್ಪಷ್ಟವಾದ ರೂಪು ಪಡೆದು ರಾಮಾನುಜರಲ್ಲಿ ಪ್ರಕಾಶಿಸುತ್ತಿವೆಯೆಂಬುದು ಯಾಮುನರಿಗೆ ತಿಳಿಯಿತು ಭಕ್ತಿ, ಪ್ರಪತ್ತಿ ಪ್ರಧಾನವಾದ ಭಾಗವತ ಸಂಪ್ರದಾಯಕ್ಕೆ, ವೇದಶಾಸ್ತ್ರಗಳ ಅಡಿಪಾಯ ಹಾಕಿ ಶ್ರೀವೈಷ್ಣವ ಸಿದ್ಧಾಂತವನ್ನು ನಿರೂಪಿಸುವ ಶಕ್ತಿ, ರಾಮಾನುಜರಲ್ಲಿ ಅಡಗಿದೆಯೆಂದೂ ಯಾಮುನರಿಗೆ ಸ್ಪಷ್ಟವಾಗಿ ಗೋಚರಿಸಿತು ಅದರಿಂದ ರಾಮಾನುಜರನ್ನು ಆಶೀರ್ವದಿಸಿ, ಅವರನ್ನು ತಮ್ಮ ಮಠಕ್ಕೆ ಕೊಡುವಂತೆ ಕಂಚಿಯ ವರದರಾಜಸ್ವಾಮಿಯನ್ನು ಪ್ರಾರ್ಥಿಸಿ, ಶ್ರೀರಂಗಕ್ಕೆ ಹಿಂದಿರುಗಿದರು

ತೈತ್ತಿರೀಯೋಪನಿಷತ್ತಿನ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ', ಛಾಂದೋಗ್ಯೋಪನಿಷತ್ತಿನ 'ಸರ್ವಂಖಲ್ವಿದಂ ಬ್ರಹ್ಮ', ಹಾಗೂ 'ತಸ್ಯಯಥಾಕಪ್ಯಾಸಂ ಪುಂಡರೀಕಂ ಏವಂ ಅಕ್ಷಿಣಿ', ಬೃಹದಾರಣ್ಯಕೋಪನಿಷತ್ತಿನ 'ಮನಸೈ ವೇದ ಮಾಪ್ತವ್ಯಂ ನೇಹನಾನಾಸ್ತಿ ಕಿಂಚನ' ಮುಂತಾದುವುಗಳ ಶಾಸ್ತ್ರಾರ್ಥದಲ್ಲಿ, ಗುರುಶಿಷ್ಯರಿಗೆ ಬಿನ್ನಾಬಿಪ್ರಾಯ ಬಂದಿತು ಯಾದವಪ್ರಕಾಶರ ಅಬಿಪ್ರಾಯ, ಉಪದೇಶಗಳೆರಡೂ ಸಮರ್ಪಕವಾಗಿ ತೋರಲಿಲ್ಲವಾದರೂ, ವಿನಯಶೀಲರಾದ ರಾಮಾನುಜರು ತಮ್ಮ ವಿರೋದಾಬಿಪ್ರಾಯವನ್ನು ಹಾಗೂ ಅತೃಪ್ತಿಯನ್ನು ಮೊದಮೊದಲು ತೋರ್ಪಡಿಸಲಿಲ್ಲವಾದರೂ, ಕೊನೆಗೆ ವ್ಯಕ್ತಪಡಿಸಲೇಬೇಕಾಯಿತು ಇದರ ಪರಿಣಾಮವಾಗಿ ಗುರುಶಿಷ್ಯರಲ್ಲಿ ವಿಶ್ವಾಸ ಹೋಗಿ, ಯಾದವಪ್ರಕಾಶರನ್ನು

ಜಿಸಿ ದ ರ ಗುರುವಿನ ಅನ್ನ ಪಡೆಯಲ್ಲ ತೂಡ ವರು ಜೊತಗೆ ಗುರುವನ್ನು ವಿರೋಧಿಸಿದುದು ುದೇ ತಪ್ಪು ಎಂಬ ಬಗ್ಗೆ ಚಿಂತ ಉಂಟಾಗಿ ರಾಮಾನುಜರ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲ ಉಂಟಾಯಿತು ಆಗ ತಾಯಿಯ ಸಲಹೆಯಂತ ಕಾಂಚಿಪೂರ್ಣರನ್ನು ದ ಟಿಯಾಗಿ, ಅವರ ಸಲ ಹೆಯಂತ ವರದರಾಜಸ್ವಾಮಿಯ ಅಬಿಷ ಕಕ್ಕಾಗಿ ಶಾಲಕ್ಕಿಣರ್ ಅದವಾ ಸಾಲವೃಕ್ಷದ ಬಾವಿಯಿಂದ, ಂದು ಕೊಡ ತೀರ್ದವನ್ನು ದಿನವೂ ತಂದೂಪ್ಪಿ ದ ಕೈಂಕರ್ಯದಲ್ಲಿ ನಿರತರಾದರು ಜೊತಗ ಧ್ಯಯನ, ಚಿಂತನ, ಮಂದನ ಮಾಡುತ್ತಿದ್ದರು

ಯಾದವಪ್ರಕಾಶದಿಂದ ರಾಮಾನುಜರು ರ್ಪಟ್ಟು ತಮ್ಮ ಶಿಷ್ಯ ಹಾಗೂ ಉತ್ತರಾದಿ ರಿ ಆಗದೇಕಂದು ಆಸಪಡುತ್ತಿದ್ದ ಯಾಮುನರಿಗೆ, ವಿಷಯ ತಿಳಿದಾಗ ಉಂಟಾದ ಸಂತೂ ಷ ಲ್ಲಿ, ಅವರು ಶ್ರೀರಂಗದ ರಂಗನಾದನನ್ನು ಕುರಿತು ಾಡಿದ ಪದ್ಯಗಳೇ ಶ್ರೀವೈಷ್ಣವ ಮತದ ಮೂಲತ ದ ಪ್ರಕಾಶಿಕೆ ಎನಿಸಿದ ಸ್ತೋತ್ರರತ್ನ

ತಮ್ಮ ಮನಸ್ಸಿನಲ್ಲಿ ಕಾಡುತ್ತಿದ್ದ ಸಂಶಯ, ಪ್ರಶ್ನೆ ಗಳಿಗೆ, ಉತ್ತರವನ್ನು ದೇವರಿಂದ ಪಡೆದು ತಿಳಿ ದಂತೆ, ರಾಮಾನುಜರು ಕಾಂಚೀಪೂರ್ಣರನ್ನು ಳಿಕೊಂಡರು ಪರಮಾತ್ಮನು ಕಾಂಚೀಪೂರ್ಣರ ಮೂಲಕ ನೀಡಿದ ಉತ್ತರ ಹೀಗಿದೆ 'ಶ್ರೀಮನ್ನಾ ರಾಯಣನೇ ಪರತತ್ವ ಹಾಗೂ ಸೃಷ್ಟಿ ಸ್ಥಿತಿ ಲಯ ರ್ತ, ಜೀವ -ಈಶ್ವರಬೇದವು ಸಹಜವಾದುದು, ವವು ಈಶ್ವರನನ್ನು ಅವಲಂಬಿಸಿದ, ಮುಕ್ತಿಗ ಪತ್ತಿ ಅದವಾ ಶರಣಾಗತಿಯೇ ಉಪಾಯವು, ಯುವಾಗ ನನ್ನ ಸ್ಮರಣೆ ಬಲಾತ್ಕಾರವಿಲ್ಲ, ಮರ ದ ನಂತರ ದೇಹದಿಂದ ಬಿಡುಗಡಯಾದಾಗ ಮುಕ್ತಿ ಸಿಗುತ್ತದ, ಅತಿ ಶ್ರೇಷ್ಠರಾದ ಮಹಾಪೂ ರ್ಣರನ್ನು ಆಚಾರ್ಯರನ್ನಾಗಿ ಸ್ವೀಕರಿಸಬೇಕು" - ಎಂಬುದೆಲ್ಲವೂ ತಿಳಿದು, ಆಮೂಲಕ ತಮ್ಮ ಸಂದೇ ಹಗಳಿಗೆಲ್ಲ ಸೂಕ್ತ ಸಮಾದಾನವು ದೊರಕಿದ ರಾಮಾ ನುಜರಿಗೆ ಮುಂದಿನ ದಾರಿಯು ಸುಸ್ಪಷ್ಟವಾಯಿತು

ರಾಮಾನುಜರು ತಮ್ಮ ಶಿಷ್ಯನಾಗದೇಕಂದು ಯಾಮುನರು ಇಚ್ಛೆಸಿದಂತಯೇ, ಯಾಮುನರ ಸ್ತೋತ್ರವನ್ನು ಮಹಾಪೂರ್ಣರಿಂದ ಆಲಿಸಿದ ರಾಮಾ ನುಜರೂ, ಯಾಮುನರೇ ತಮ್ಮ ಗುರುಗಳಾಗಬೇ ಕೆಂದು ಇಚ್ಛೆಸಿದ್ದರು ಯಾಮುನರನ್ನು ನೋಡ ಬೇಕಂಬ ಉತ್ಸುಕತಯಿಂದ ಶ್ರೀರಂಗಕ್ಕೆ ಹೋದರು ಅವರಿಂದ ತಾವು ಮಾರ್ಗದರ್ಶನ ಪಡೆದು ಆದ್ಯಾತ್ಮ ಮಾರ್ಗದಲ್ಲಿ ಮುಂದುವರೆಯಬಹುದಾಗಿತ್ತೋ,

ಯಾದವಪ್ರಕಾಶರ ನಂತರ ಗುರುವೆಂದಿಲ್ಲದ ತೂಳ ಲುತ್ತಿದ್ದ ತನ್ನನ್ನು ಯಾವ ಮಹನೀಯರು ಕೈಚಾಚಿ ಕರದರೋ, ಯಾರ ಶಿಷ್ಯತ್ವ ಪಡದು ಉತ್ತರಾದಿ ಕಾರಿಯಾಗಬೇಕಾಗಿತ್ತೋ, ಅಂತಾ ಯಾಮುನರ ದರ್ಶನ ರಾಮಾನುಜರಿಗೆ ಆಗಲಿಲ್ಲ ಅಲ್ಲಿ ಅವರ ಶವವನ್ನು ಮಾತ್ರ ನೋಡಲು ಸಾಧ್ಯವಾ ಯಿತು ಯಾಮುನರಿಂದ ಪ್ರತ್ಯಕ್ಷವಾಗಿ ಉಪದೇಶ ವನ್ನು ಪಡೆಯಲಾಗಲಿಲ್ಲವಲ್ಲಾ, ಅವರನ್ನು ಜೀವಂ ತವಾಗಿ ನೋಡುವ ಬಾಗ್ಯ ಸಿಗಲಿಲ್ಲವಲ್ಲಾ, ಎಂದು ಸದಾ ಕೊರಗುತ್ತಿದ್ದರು ಸಾಂಸಾರಿಕ ಜೀವನದಲ್ಲಿ ಹಾಗೂ ಪ್ರಾಪಂಚಿಕ ವ್ಯವಹಾರಗಳಲ್ಲಿ ಅನಾಸಕ್ತಿ ಹೆಚ್ಚಿತು

ಯಾದವಪ್ರಕಾಶರ ಶಿಷ್ಯಗೋಷ್ಠಿಯಲ್ಲಿದ್ದಾಗಲೇ, ಯಾಮುನರು ರಾಮಾನುಜರನ್ನು ದೂರದಿಂದಲೇ ಕಟಾಕ್ಷಿಸಿ, ಅವರನ್ನು ಇಳಿಯ ಪೆರುಮಾಳ್ ಎಂದು ಕರೆದಿದ್ದರು ಯಾಮುನರ ಅಂತಿಮೇಚ್ಛೆಯಂತೆ ಅವರನಂತರ ಆಚಾರ್ಯ ಪೀಠವನ್ನು ಅಲಂಕರಿಸ ಬೇಕಾದ ರಾಮಾನುಜರಿಗೆ, ಯಾಮುನರಿಂದ ನೇರ ವಾಗಿ ಉಪದೇಶವು ಲಬಿಸದಿದ್ದರೂ, ಅವರ ಜ್ಞಾನಾ ನುಬವದ ಒಂದೊಂದು ಮುಖವನ್ನು ಪಡೆದು ಕಾದಿಟ್ಟಿದ್ದ ಅವರ ಆಪ್ತಶಿಷ್ಯರಿಂದ ಉಪದೇಶ ದೊರಕಿ, ಆ ಮೂಲಕ ಯಾಮುನರ ಅನು ಗ್ರಹವು ಪೂರ್ಣವಾಗಿ ರಾಮಾನುಜರಿಗೆ ದೊರಕಿ ತೆಂದು ಹೇಳಬಹುದು

ತಾಯಿಯಾದ ಕಾಂತಿಮತಿಯು ಮರಣಹೊಂ ದಿದುದರಿಂದ, ಸತಿಪತಿಯರಲ್ಲಿ ಬಿನ್ನತೆ ಹೆಚ್ಚಿತು ಕಾಂಚೀಪೂರ್ಣ ಮತ್ತು ಮಹಾಪೂರ್ಣರಿಬ್ಬರಿಗೂ ಪತ್ನಿಯ ಕಾರಣದಿಂದ ಸರಿಯಾದ ಗೌರವ ಸಲ್ಲಿ ಸಲಾಗದ, ಆದ್ಯಾತ್ಮಿಕ ಸಾದನೆಗೆ ಹಾಗೂ ನೂತನ ಸಿದ್ಧಾಂತ ಪ್ರಚಾರಕ್ಕೆ ಅಡ್ಡಿ ಎನಿಸಿದ್ದ ಗೃಹಸ್ಥ ಜೀವ ನದವನ್ನು ತೊರೆದು, ಲೋಕೋದ್ಧಾರಕ್ಕೆ ಅವಶ್ಯವಾದ ಸಂನ್ಯಾಸವನ್ನು ವರದರಾಜಸ್ವಾಮಿಯ ಸನ್ನಿದಿಯಲ್ಲಿ ಸ್ವೀಕರಿಸಿ ಯತಿರಾಜನೆನಿಸಿದರು

ವರದರಾಜಸ್ವಾಮಿಯ ಆದೇಶದಂತೆ, ತಮ ಗಿಂತ ಜಾತಿಯಲ್ಲಿ ಕೀಳಾಗಿದ್ದರೂ, ಆದ್ಯಾತ್ಮಿಕತೆ ಯಲ್ಲಿ ಮೇಲಾಗಿದ್ದ ಪೆರಿಯನಂಬಿಗಳನ್ನು ರಾಮಾ ನುಜರು ಗುರುವಾಗಿ ಸ್ವೀಕರಿಸಿದರು ಅವರಿಂದ ವಿಶಿಷ್ಟಾದ್ವೈತದ ಗೂಡತತ್ವ ರಹಸ್ಯಗಳನ್ನು ತಿಳಿ ದರು

ಇವರ ಆದೇಶದಂತ ಬಹುಕಷ್ಟಪಟ್ಟು ಗೋಷ್ಠೀ ಪೂರ್ಣರನ್ನು ಒಲಿಸಿಕೊಂಡು ಅವರಿಂದ ತಿರು ಮಂತ್ರವನ್ನು ಕಲಿತರು ಯಾವ ಮಂತ್ರವನ್ನು ಜಪಿಸುವುದರಿಂದ ಹಾಗೂ ಶ್ರವಣಮಾಡುವುದ ರಿಂದ ಬವದ ಕಷ್ಟಗಳೆಲ್ಲವೂ ತೊಲಗಿ, ಜೀವನ ದಲ್ಲಿ ಸುಖ, ಶಾಂತಿಗಳು ಲಬಿಸಿ, ಅಂತ್ಯದಲ್ಲಿ ಮುಕ್ತಿ ದೊರಕುವುದೂ, ಅದನ್ನು ಗುಪ್ತವಾಗಿಟ್ಟುಕೊಳ್ಳ ಬಾರದೆಂದು ತೀರ್ಮಾನಿಸಿ, ಎಲ್ಲರಿಗೂ ಉಪದೇ ಶಿಸಿಬಿಟ್ಟರು ಗುರುಗಳು ರಾಮಾನುಜರ ಬಗ್ಗ ಮೊದಲು ಬಹಳ ಕೋಪಗೊಂಡರೂ, ಆಮೇಲೆ ಅವರ ಔದಾರ್ಯ, ಕಾರುಣ್ಯಗಳನ್ನು ಮೆಚ್ಚಿಕೊಂ ಡರು ದೀನರ ಹಾಗೂ ಪಾಪಿಗಳ ಉದ್ಧಾರ ವಾಗಿ ಅವರಿಗೆಲ್ಲ ಮುಕ್ತಿ ಲಬಿಸುವುದಾದರ, ತಾನು ನರಕದಲ್ಲಿ ಕಷ್ಟಪಡಲು ಸಿದ್ಧ ಎನ್ನುವ ಈ ಬಾವ ನಯೇ, ರಾಮಾನುಜರನ್ನು ವಿಶ್ವದ ಶ್ರೇಷ್ಠತಮ ವ್ಯಕ್ತಿ ಗಳ ಸಾಲಿಗ ಸೇರಿಸಲು ಕಾರಣವಾಯಿತು

ಗುರುಗಳ ಸಲಹೆಯಂತೆ, ನಮ್ಮಾಳ್ವಾರರ ಪ್ರಬಂ ದಗಳಲ್ಲಿ ವಿಶೇಷ ಪ್ರಾವೀಣ್ಯತಯನ್ನು ಪಡೆದಿದ್ದ ಮಾಲಾದರರಲ್ಲಿ, ರಾಮಾನುಜರು ದಿವ್ಯ ಪ್ರಬಂ ದಗಳ ವಿಶೇಷಾರ್ದಗಳನ್ನು ಕಲಿಯಲಾರಂಬಿಸಿ ದರು ಅಲ್ಲಲ್ಲಿ ಗುರುಗಳ ವ್ಯಾಖ್ಯಾನ ಸರಿಯಿಲ್ಲ ವೆಂದು ರಾಮಾನುಜರಿಗೆ ಅನಿಸಿದಾಗ, ತಮ್ಮ ಅತೃ ಪ್ತಿಯನ್ನು ತೋರಿಸಿ, ತಮಗೆ ತೋರಿದ ಅರ್ದವಿ ವರಣೆಯನ್ನು ಕೊಡುತ್ತಿದ್ದರು ಮೊದಲು ಅಸ ಮಾದಾನಗೊಂಡರೂ, ಗೋಷ್ಠೀಪೂರ್ಣರ ಅಪೇ ಕ್ಷಯಂತೆ ಪಾಠವನ್ನು ಮುಂದುವರಸಿ, ಕೊನಗೆ ರಾಮಾನುಜರಿಗೆ ಚನ್ನಾಗಿ ತಿಳಿದಿದೆ ಎಂಬುದನ್ನು ಅರಿತುಕೊಂಡರು ಗುರುಗಳಿಗೆ ಅಪಚಾರವಾಗುವು ದೆಂಬ ಬಯದಿಂದ, ರಾಮಾನುಜರು ಪ್ರಬಂದಗಳ ಬಗ್ಗೆ ತಾವು ಹೊಂದಿದ್ದ ಅಬಿಪ್ರಾಯಗಳನ್ನು ತಾವೇ ಬರೆಯದ, ತಮ್ಮ ಶಿಷ್ಯ ಪಿಳ್ಳಾನ್‌ರವರಿಂದ ಬರಸಿ ದರು

ಆಮೇಲೆ ಶ್ರೀರಂಗದಲ್ಲಿದ್ದ ಆಳವಂದಾರಳ್ವಾನ್ ಅಥವಾ ವರರಂಗಗಾಯಕರಿಗೆ ಸೇವೆ, ಶುಶ್ರೂಷ ಮಾಡಿ, ರಾಮಾನುಜರು ಅವರಿಂದ ದಿವ್ಯ ಪ್ರಬಂ ದದ ಮೂಲವನ್ನೂ, ಆಚಾರ್ಯಾಬಿಮಾನದ ಲಕ್ಷ ಣಗಳನ್ನೂ ಗ್ರಹಿಸಿದರು

ಸೋದರಮಾವ ಶ್ರೀಶೈಲಪೂರ್ಣರಲ್ಲಿ ಕಾಲಕ್ಷೇ ಪಮಾಡಿ ಪ್ರಪತ್ತಿವೇದ ಅದವಾ ಶರಣಾಗತಿಶಾಸ್ತ್ರ ಎನಿಸಿದ ರಾಮಾಯಣದ ಗೂಡಾರ್ದವನ್ನರಿತರು ಹೀಗೆ ಯಾಮುನರ ಐದರು ಮುಖ್ಯ ಶಿಷ್ಯರಿಂದ ಉಪದೇಶ ಪಡೆದ ರಾಮಾನುಜರು, ಆ ಮೂಲಕ ಪಂಚಾಚಾರ್ಯ ಪದಾಶ್ರಯರೆನಿಸಿ ಪ್ರಖ್ಯಾತರಾ ದರು ಆಚಾರ್ಯಯಾಮುನರ ಆಜ್ಞೆಯನ್ನು

ಪಾಲಿಸಿ, ಇವರು ಆಚಾರ್ಯರೂ ರಾಮಾನುಜರ ಸಂಪರ್ಕದಿಂದ ತಾವು ಕೃತಾರ್ಥರಾದವೆಂದು ಬಾವಿಸಿದರು

ಹೀಗ ಎಮೂಒ ಆಚಾರ್ಯರಿಂದ ವಿಶಿಷ್ಟಾದ್ವೈತದ ಒಂದೊಂದು ರಹಸ್ಯವನ್ನು ಒಂದೊಂದು ರೀತಿಯಲ್ಲಿ ಪಡೆದುಕೊಂಡ ರಾಮಾನುಜರು, ಅವುಗಳನ್ನೆಲ್ಲಾ ತಮ್ಮ ಅನುಷ್ಠಾನಾದಿಗಳಿಂದ ದೃಢಪಡಿಸಿಕೊಂಡು, ಸಿದ್ಧಾಂತದ ರಕ್ಷಣೆ ಪ್ರಚಾರಗಳಿಗೆ ಅವಶ್ಯಕವಾದ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಿಕೊಂಡು, ಆಮೇಲೆ ತಮ್ಮ ಕೃತಿಗಳಲ್ಲಿ ತತ್ತ್ವ ಹಿತ, ಪುರುಷಾರ್ಥಗಳನ್ನೆಲ್ಲ ಹೃದಯಂಗಮವಾಗಿ ನಿರೂಪಿಸಿದ್ದಾರೆ ರಾಮಾನುಜರ ಈ ಕಾರ್ಯದಲ್ಲಿ ಅವರ ಆಪ್ತಶಿಷ್ಯರಾದ ಕೂರೇಶ, ದಾಶರಥಿ ಇಬ್ಬರ ಸೇವೆಯು, ಅಪಾರ ಹಾಗೂ ಅಸದೃಶ

ರಾಮಾನುಜರು ಕೂರೇಶರ ನೆರವಿನಿಂದ ಬ್ರಹ್ಮಸೂತ್ರಗಳಿಗ ವಿಶಿಷ್ಟಾದ್ವೈತ ಪರವಾದ ಶ್ರೀಬಾಷ್ಯವನ್ನು ತಾವೇ ರಚಿಸಿದರು, ಕೂರೇಶರ ಮಗನಿಗ ಪರಾಶರನೆಂದು ಹೆಸರಿಟ್ಟು ಅವರಿಂದ ವಿಷ್ಣುಸಹಸ್ರನಾಮಕ್ಕೆ ವ್ಯಾಖ್ಯಾನ ಬರೆಸಿದರು, ಶ್ರೀಶೈಲಪೂರ್ಣರ ಮಗನಿಗೆ ಕುರುಕೇಶನೆಂದು ಹೆಸರಿಟ್ಟು ಅವರಿಂದ ತಿರುವಾಯ್ಮೊಳಿಗೆ ಬಾಷ್ಯವನ್ನು ಬರೆಸಿದರು ಹೀಗೆ ಯಾಮುನರ ಅಂತಿಮ ಇಚ್ಛೆಯನ್ನು ಪೂರೈಸಿ, ಅವರ ಶವದ ಮುಂದ ಮಾಡಿದ ತಮ್ಮ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದರು

ರಾಮಾನುಜರು, ಅತ್ಯುತ್ತಮವಾದ ಒಂಬತ್ತು ದರ್ಮ ಗ್ರಂದಗಳನ್ನು ರಚಿಸುವುದರ ಮೂಲಕ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದಾರ ಶ್ರೀಬಾಷ್ಯ ವೇದಾರ್ಥಸಂಗ್ರಹ, ವೇದಾಂತದೀಪ, ವೇದಾಂತಸಾರ, ಗೀತಾಬಾಷ್ಯ ಶರಣಾಗತಿ ಗದ್ಯ ಶ್ರೀರಂಗಗದ್ಯ ಶ್ರೀವೈಕುಂಠ ಗದ್ಯ ನಿತ್ಯಗ್ರಂದ ಇವು ರಾಮಾನುಜರ ಕೃತಿಗಳು

ಶ್ರೀಬಾಷ್ಯವು ಬಹು ಮುಖ್ಯವಾದುದು ಇದರಲ್ಲಿ ಸಂಪ್ರದಾಯದ ಜಾಡನ್ನೇ ಹಿಡಿದು ಹೊಸ ರೀತಿಯಲ್ಲಿ ಹಳೆಯ ಅರ್ಥವನ್ನು ಸಮಗ್ರವಾಗಿ ಸಮನ್ವಯಗೊಳಿಸಲಾಗಿದೆ ಇದು ರಾಮಾನುಜರ ಪಾಂಡಿತ್ಯಕ್ಕೆ ಉತ್ಕೃಷ್ಟವಾದ ಉದಾಹರಣೆಯಾಗಿರುವ ಗ್ರಂದ ಎರಡನೆಯ ರಾಮಮಿಶ್ರರ ಶ್ರೀಬಾಷ್ಯ ವಿವರಣ, ಸುದರ್ಶನ ಸೂರಿಗಳ ಶ್ರುತಪ್ರಕಾಶಿಕೆ, ವಾತ್ಸ್ಯ ವರದಾಚಾರ್ಯರ ತತ್ತ್ವಸಾರ, ವೇದಾಂತ ದೇಶಿಕರ ತತ್ತ್ವ ಟೀಕ, ಮೇಘನಾದಾರಿ ಸೂರಿಗಳ ನಯಪ್ರಕಾಶಿಕೆ, ವೀರರಾಘವದಾಸರ ತಾತ್ಪರ್ಯ ದೀಪಿಕೆ ಪರಕಾಲ ಸ್ವಾಮಿಗಳ ಮಿತ ಪ್ರಕಾಶಿಕೆ -- ಇವು ಶ್ರೀಬಾಷ್ಯದ ಗೂಡಾರ್ಥಗಳನ್ನು ವಿವರಿಸುವ ಸಲುವಾಗಿ ವಿವಿದ ಕಾಲಗಳಲ್ಲಿ ರಚಿಸಲ್ಪಟ್ಟ ವೃತ್ತಿ ಗ್ರಂದಗಳು

ಗ್ರಂದ ರಚನೆಯಾದ ಮೇಲೆ ರಾಮಾನುಜರು ತಮ್ಮ ಶಿಷ್ಯರೊಡನೆ ತಮ್ಮ ನೂತನ ಪಂದವು ಎಲ್ಲರಿಗೂ ಸಿಗಬೇಕೆಂಬ ಉದ್ದೇಶದಿಂದ, ದಾರ್ಮಿಕ ಯಾತ್ರೆಗೆ ಹಾಗೂ ದರ್ಮ ದಿಗ್ವಿಜಯಕ್ಕೆ ಹೊರಟರು ಬಾರತದಲ್ಲೆಲ್ಲ ಇರುವ ಪವಿತ್ರ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ಬಗವಂತನ ಸೇವೆ ಮಾಡಿದರು ಹೋದೆಡೆಗಳಲ್ಲೆಲ್ಲ ವಿದ್ವತ್ಸಬೆಗಳಲ್ಲಿ ವಾದಮಾಡಿ, ತಮ್ಮ ನೂತನ ಸಿದ್ಧಾಂತದ ರಹಸ್ಯಗಳನ್ನೆಲ್ಲ ವಿವರಿಸಿ, ಶೈವ ಮತ್ತು ಜೈನ ಪಂದದ ಅನೇಕರನ್ನು ಶ್ರೀವೈಷ್ಣವರನ್ನಾಗಿ ಪರಿವರ್ತಿಸಿದರು ತಮ್ಮ ಮಾರ್ಗಕ್ಕಿಂತ ಭಿನ್ನವಾಗಿದ್ದರೂ, ರಾಮಾನುಜರ ದರ್ಮಶ್ರದ್ಧೆ, ಸ್ವಮತನಿಷ್ಠೆ, ತತ್ತ್ವ ಪ್ರಸಾರದಲ್ಲಿ ಅವರಿಗಿದ್ದ ಅದಮ್ಯ ಉತ್ಸಾಹಗಳನ್ನು ಅನೇಕ ವಿದ್ವಾಂಸರು ಕೊಂಡಾಡಿ, ಅವರ ನವೀನ ಮತವನ್ನು ಮೆಚ್ಚಿದರು ಇವರ ಪಾಂಡಿತ್ಯ ಪ್ರತಿಬೆ, ಬಕ್ತಿ, ಶೀಲಗಳನ್ನು ನೋಡಿದ ಸಾವಿರಾರು ಆಸ್ತಿಕರು ಇವರ ಶಿಷ್ಯರಾದರು ತೊಂಡನೂರು ನಂಬಿ ಎಂಬ ಶಿಷ್ಯನ ಅಪೇಕ್ಷೆಯಂತೆ, ಹಿಂದೆ ಚಾಳುಕ್ಯದೊರೆ ವೀರರಾಜೇಂದ್ರನ ಮಗಳಿಗೆ ಗುಣಪಡಿಸಿದಂತೆ, ಹೊಯ್ಸಳ ರಾಜ ಬಿಟ್ಟಿ ದೇವನ ಮಗಳಿಗೂ ಗುಣಪಡಿಸಿ, ರಾಜನಿಗೆ ಶ್ರೀವೈಷ್ಣವ ದೀಕ್ಷೆಯನ್ನಿತ್ತು ವಿಷ್ಣುವರ್ದನನೆಂದು ಕರೆದರು ಮೇಲುಕೋಟೆಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದರು ಹೀಗೆ ಇದರಿಂದ ಅನೇಕ ಸ್ಥಳಗಳಲ್ಲಿ ವಿಷ್ಣು ದೇವಾಲಯಗಳ ನಿರ್ಮಾಣ, ಅವುಗಳ ಪೂಜಾವ್ಯವಸ್ಥೆ, ಶ್ರೀವೈಷ್ಣವ ಮಠಗಳ ಸ್ಥಾಪನ ಆಯಿತು

ಸಂಸ್ಕೃತ ವೇದಾಂತ ಮತ್ತು ತಮಿಳು ಪ್ರಬಂಧ ಎರಡೂ ಸಮರಸವುಳ್ಳವು ಎಂದು ಪ್ರತಿಪಾದಿಸಿ, ಸಂಸ್ಕೃತದ ಶ್ರುತಿಯ ಜೊತೆಗ, ತಮಿಳಿನ ಆಳ್ವಾರುಗಳ ಅನುಬವಗಳಿಗೂ ಪ್ರಾದಾನ್ಯತೆಯನ್ನು ಕೊಟ್ಟು, ಎರಡೂ ಬಾಷೆಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಆದಾರವಾದ ಗ್ರಂದಗಳು ಬರುವಂತೆ ಮಾಡಿ, ಅದು ಶಾಶ್ವತವಾಗಿ ನಿಲ್ಲುವಂತೆ ಉಬಯ ವೇದಾಂತದ ಸಿಂಹಾಸನಾದಿಪತಿ ಎನಿಸಿಕೊಂಡು, ತಮ್ಮ ನೂತನ ಸಿದ್ಧಾಂತಕ್ಕೆ 'ಎಂಬೆರುಮಾನಾರ್ ದರ್ಶನಂ' ಅದವಾ 'ರಾಮಾನುಜ ದರ್ಶನ' ಎಂದು ಹೆಸರು ಬರುವಂತೆ ಮಾಡಿದರು

ನೂರಿಪ್ಪತ್ತು ವರ್ಷಗಳ ತುಂಬು ಜೀವನವನ್ನು ನಡೆಸಿದ ರಾಮಾನುಜರು, ತಮ್ಮ ಶ್ರೇಷ್ಠವಾದ ತ್ಯಾಗಮಯ ಜೀವನ - ಕೆಲಸಗಳಿಂದ, ಇತಿಹಾಸ ನಿರ್ಮಾಪಕರೆನಿಸಿದ್ದಾರ ಎಂದರ ಅತಿಶಯೋಕ್ತಿಯಾಗಲಾರದು

***

# ಕೈವಾರದ ಕವಿ ಪ್ರತಿಭೆ

ವಿದ್ವಾನ್ ಬ ನ ಗುಂಡೂರಾವ್

ಕನ್ನಡದ ಶಕ್ತಿ ಕವಿ ರನ್ನನಂತೆ ಈತನೂ ಸಹ
ತ್ತಿಯಲ್ಲಿ ಬಳೆಗಾರ ಈತ ವಿದ್ಯಾವಂತನಲ್ಲ –
ಂದಿನ ಅರ್ಥದಲ್ಲಿ ಆದರೆ ಅಧ್ಯಾತ್ಮ ವಿದ್ಯಾಪ್ರ
ಣ ವಸ್ತುತ ವಿದ್ಯೆ ಎಂದರೆ ಅಧ್ಯಾತ್ಮ ವಿದ್ಯೆ
ೀತಾನೆ" ಈತನ ಹೆಸರು ನಾರಣಪ್ಪ ಪದವಿ
ಳಿಸದೊಂದಗ್ಗಳಿಕೆ – ಎಂಬ ದೃಷ್ಟಿಯಲ್ಲಿ ಗದು
ರ ನಾರಣಪ್ಪನಿಗೂ – ಕೈವಾರದ ನಾರಣಪ್ಪನಿಗೂ
ಂಬ ಸಾಮ್ಯವಿದೆ ಇಬ್ಬರೂ ಭಕ್ತಕವಿಗಳು –
ತಿಭಾಸಂಪನ್ನರು – ಕಾವ್ಯಯೋಗಿಗಳು – ದೈವ
ಕ್ಷಾತ್ಕಾರ ಪಡೆದ ಪುಣ್ಯಜೀವಿಗಳು

ಕೋಲಾರ ಜಿಲ್ಲೆಯ ಒಂದು ಗ್ರಾಮ ಕೈವಾರ
ದು ಮಹಾಭಾರತದ ಏಕಚಕ್ರನಗರವೆಂದು ಕೆಲ
ರ ನಂಬಿಕೆ ಆ ಮಾತು ಬೇರೆ ನಮ್ಮದೇಶ
ಲ್ಲಿ ಇಂತಹ ಭಾವುಕ ಕಲ್ಪನೆಗಳಿಗೂ ಭ್ರಾಮಕ
ಲ್ಪನೆಗಳಿಗೂ ಇತಿಮಿತಿ ಇಲ್ಲ ಆದರೆ ಈ
ಗ್ರಾಮದ ಒಬ್ಬ ಸಾಮಾನ್ಯವ್ಯಕ್ತಿ ಅಸಾಧಾರಣವ್ಯ
ಯಾಗಿ ಮೆರೆದಿದ್ದಾನೆ ಅಮೂಲ್ಯ ಸಂಗೀತ ಕೃತಿ
ಳನ್ನು ರಚಿಸಿದ್ದಾನೆ ಜನ ಸಾಮಾನ್ಯರ ಭಾಷೆ
ನ್ನು ಎಳಸಿಕೊಂಡಿದ್ದಾನೆ ಇಂದಿಗೂ ಸಹಸ್ರ
ಸಹಸ್ರಮಂದಿಯ ನಾಲಿಗೆಯ ಮೇಲೆ ಈ ಕವಿಯ
ಗಳು ನಕ್ಕುನಲಿದಾಡುತ್ತಿವೆ – ಎಂಬುದಂತೂ
ಸ್ಯ ಈತ ಸುಮಾರು 250–300 ವರ್ಷಗಳ
ಂದಿನವನು

ಈತನ ಆರಾಧ್ಯದೇವತೆ ಕ್ಷೇತ್ರಾಧಿಪತಿಯೂ
ತ್ರಾಭಿಮಾನದೇವತೆಯೂ ಸರ್ವರಕ್ಷನೂ ಆದ
ಮರನಾರಾಯಣ ಸ್ವಾಮಿ ನಾರಣಪ್ಪ ಹಿರಿಸಿ
' ಜೀವ ಗೃಹಸ್ಥನಾಗಿದರೂ – ಪದ್ಮಪತ್ರಮಿ
ಂಭಸಾ – ಅಂಟಿ ಅಂಟದಂತೆ ಬಾಳಿದವನು
ನಿರ್ಲಿಪ್ತತೆ ಆತನ ಬಾಳಿಗೊಂದು ಮೆರುಗು
ಟ್ಟಿದೆ ಪ್ರತಿಭೆಗೆ ಸಾಣೆಹಿಡಿಸಿದೆ ಜೀವಕ್ಕೆ
ಮಾಧಾನ ಕೊಟ್ಟಿದೆ – ಅಮೂಲ್ಯ ಕೀರ್ತನೆ
ಳು ಹೊರಹೊಮ್ಮುವಂತೆ ಮಾಡಿದೆ ಆತನ
ಂದೊಂದು ಕೃತಿಯೂ ಗಂಭೀರಾರ್ಥ ಭೂಯಿ
ವಾಗಿದ್ದು – ಅಮರನಾರಾಯಣನ ಶ್ರೀಪಾದಗ
ಲ್ಲಿ ಸಮರ್ಪಿಸಿದ ಕುಸುಮರಾಜಿಯಾಗಿದೆ –
ಮನ ಸಂತಯವಾಗಿದೆ

ಸಂಗೀತಗಾರರು ಈ ಕೀರ್ತನೆಗಳನ್ನು ಹಾಡಿ
ಹಾಡಿ ಎಳಕೆಗೆ ತರುವ ಸೌಜನ್ಯ ತೋರಬೇಕಾ
ಗಿದೆ ಏಹಿತ ಇಂತಹ ಅನೇಕಜನ ವಾಗ್ಗೇಯ
ಕಾರರು ಇರಬಹುದು ಅವರ ರಚನೆಗಳು ಉತ್ತ
ಮೋತ್ತಮವಾಗಿರಬಹುದು ಆದರೆ ಸಂಗೀತ
ಕಚೇರಿಗಳಲ್ಲಿ ಹಾಡಿದಲ್ಲದೆ – ಅವು ಜನಪ್ರಿಯ
ವಾಗಲಾರವು ಕೈವಾರದ ಕವಿಯ ಕೆಲವು ಕೀರ್ತ
ನೆಗಳನ್ನು ಪ್ರಸಿದ್ಧ ಗಾಯಕ ಶ್ರೀ ಬಾಲಮುರಳಿಕೃ
ಷ್ಣರವರು ಹಾಡುವ ಕೃಪೆ ಮಾಡಿದ್ದಾರೆ ಕೈವಾರದ

ಕವಿಯ ಕೀರ್ತನೆಗಳನ್ನು – ವೇದಾಂತಸಾರಾವಳಿ
ಶ್ರೀಕೃಷ್ಣ ತತ್ವಾಮೃತಸಾರ ಬ್ರಹ್ಮಾನಂದ ಸ್ವಾರಾ
ಯಣಶತಕ ಭೀಮಲಿಂಗಶತಕ ಹೀಗೆ ಅನೇಕ
ಗುಂಪಾಗಿ ವಿಂಗಡಿಸಲಾಗಿದೆ ಈತ ಎರೆದ ಕಾಲ
ಜ್ಞಾನ ಜನಪ್ರಿಯವಾಗಿದೆ ಈ ಕವಿ ನಾರಾಯಣ
ಎನ್ನುವ ಕಡೆ ಎಲ್ಲ ನಾರೇಯಣ – ಎಂದಿರು
ವುದಕೆ ಗ್ರಾಮ್ಯಪ್ರಯೋಗವೆಂಬುದೇ ಕಾರಣವಾಗಿ
ದಿರಬಹುದು ಅನ್ನಮಾಚಾರ್ಯನ ಕೃತಿಗಳಲ್ಲಿ
ವೈವಿಧ್ಯವಿರುವಂತೆ ಈತನ ಕೃತಿಗಳಲ್ಲೂ ಸಹ –



ಕೀರ್ತನ - ಪದ - ಯಾವುದರ - ಗದ್ಯ - ತ್ರಿಪದ - ಷಟ್ಪದ - ಕಂದ ಇತ್ಯಾದಿ ಪದ್ಯವಿರಲಿ ದಾಸರ ಪದಗಳಿಗೆ ದೋಷವಿಲ್ಲ ಯಾವ ರಾಗದಲ್ಲಿ ಬೇಕಾದರೂ ಹಾಡಬಹುದು ಎಂಬಂತೆ ಈತನ ಕವಿತೆಗಳನ್ನೂ ಅಷ್ಟೆ ಯಾವ ರಾಗದಲ್ಲಿ ಬೇಕಾದರೂ ಹೊಂದಿಸಿಕೊಂಡು ಹಾಡಬಹುದು ಆದರೂ ಸಹ ಕವಿಯೇ ಕೆಲವು ರಾಗಗಳನ್ನು ಸೂಚಿಸಿರುವುದು ಗಮನಾರ್ಹ ಈತನ ಅನೇಕ ಕವಿತೆಗಳಲ್ಲಿ ನಾಡೀಕ್ರಿಯ - ಯೋಗಪ್ರಕ್ರಿಯಗಳ ವಿವರವಿವರಣೆ - ಕುಂಡಲಿನೀ ಉದ್ದೀಪನ - ಅನಾಹತನಾದ - ಪ್ರಧಾನ ವಸ್ತುವಾಗಿ ಕಾಣುತ್ತದೆ ವೈರಾಗ್ಯವನ್ನು ಬೋಧಿಸುವ - ಆತ್ಮ ಪ್ರಬೋಧ ವಾಕ್ಯಗಳು ಖೇಚರಿಮುದ್ರೆ - ಹಟಯೋಗ - ತ್ರಾಟಕ ಮುಂತಾದ ಅಂಶಗಳು ಕೆಲವು ಕವಿತೆಗಳಲ್ಲಿ ಪ್ರಕಟಗೊಂಡಿವೆ ಸಾಂಕೇತಿಕವಾಗಿ ಕೆಲವು ಒಗಟುಗಳನ್ನು ಸಹ ಅಲ್ಲಲ್ಲಿ ಎಂದಿವೆ ಅಸ್ಮದ್ಗುರುಭ್ಯೋ ನಮಃ ಹಯಗ್ರೀವಾಯನಮ ಆದಿಕೇಶವಾಯನಮ -ಎಂಬ ವಾಕ್ಯ ಅನೇಕ ಕಡೆ ಎಂದಿರುವುದನ್ನು ಗಮನಿಸಿ ಕೆಲವರು ಈತನ ಮೇಲೆ ವಿಶಿಷ್ಟಾದ್ವೈತದ ಪ್ರಭಾವ ಬಿದಿರಬಹುದೇ - ಎಂದು ತರ್ಕಿಸುವುದುಂಟು ವಸ್ತುತ ಈತ ದ್ವೈತಾದ್ವೈತ ವಿಶಿಷ್ಟಾದ್ವೈತ ಇತ್ಯಾದಿಗಳಿಂದ ದೂರವಿದ್ದಾನೆ - ಅದರ ಮೇಲೇರಿದಾನೆ - ಸಮ್ಯಕ್ ದೃಷ್ಟಿಪಡೆದಿದ್ದಾನೆ ಸೌಧವೇರಿದವರಿಗೆ ನಭವ ಸೆರಿದವರಿಗೆ ಬೀದಿ ಬೆಳಕಿಂದೇನು - ಮಂಕುತಿಮ್ಮ ॥



ಕೈವಾರದ ಈ ಕವಿಯ ಮೇಲೆ ಪುರಂದರದಾಸ ಭದ್ರಾಚಲರಾಮದಾಸ - ಅನ್ನಮಾಚಾರ್ಯ ಮುಂತಾದವರ ಪ್ರಭಾವ ಬಿದ್ದಿದೆ ಎಂಬುದಕ್ಕೆ ಆತನ ಕೀರ್ತನೆಗಳಲ್ಲೇ ಆಧಾರ ಸಿಕ್ಕುತ್ತದೆ ಹೀಗೆ ಪ್ರಭಾವಿತನಾಗುವುದು ಅಸಹಜವೇನಲ್ಲ ತ್ಯಾಗರಾಜಸ್ವಾಮಿಯವರು ಬರೆದಿರುವ - ಪ್ರಹ್ಲಾದ ಭಕ್ತ ವಿಜಯ - ಎಂಬ ಗೀತನಾಟಕದಿಂದ ಪ್ರಭಾವಿತನಾಗಿ ಈ ಕವಿ ಶ್ರೀಕೃಷ್ಣ ಚರಿತ ತತ್ವಾಮೃತ ಯೋಗಪ್ರಬಂಧ - ಎಂಬ ಸುಂದರ ಗೀತನಾಟಕ ರಚಿಸಿದ್ದಾನೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಾದ ಭಕ್ತಿ - ಸಮಾಜ ಸುಧಾರಣೆ ಈತನ ರಚನೆಗಳಲ್ಲಿ ಹೇರಳವಾಗಿದೆ

ಕಾಲಜ್ಞಾನ - ಭವಿಷ್ಯಕಥನ - ಭಾಗವತೇತ್ಯಾದಿ ಅನೇಕ ಗ್ರಂಥಗಳಲ್ಲಿದೆ ವೀರಬ್ರಹ್ಮೇಂದ್ರ ಯೋಗಿಯ ಕಾಲಜ್ಞಾನ - ಕೈವಾರದ ಕವಿಯ ಕಾಲಜ್ಞಾನ ಹೀಗೆ ಅನೇಕರು ತಮ್ಮ ದಿವ್ಯದೃಷ್ಟಿಯಿಂದ ಜಗತ್ತಿನ ಭವಿಷ್ಯವನ್ನು ಕುರಿತು ನುಡಿದಿದ್ದಾರೆ ಈ ಕಾಲಜ್ಞಾನ ಲೇಖನದಲ್ಲಿ ಕೆಲವು ಪಾಶ್ಚಾತ್ಯ ಲೇಖಕರೂ ಇದ್ದಾರೆಂಬುದು ಗಮನಾರ್ಹ ಸಂಗತಿ ಈ ಭವಿಷ್ಯದರ್ಶಿಗಳು ಹೇಳಿದ ಅನೇಕ ವಿಚಾರಗಳು ಸತ್ಯವೆಂದು ಸಾಬೀತಾಗಿವೆ -ಎಂಬುದು ಜಗತ್ತಿನ ಅನುಭವದಲ್ಲಿದೆ ಸಾಂಕೇತಿಕವಾಗಿ ವೇದಾಂತ ಬೋಧಿಸುವಲ್ಲಿ ಕೈವಾರದ ಈ ಕವಿ ನಾರಣಪ್ಪನಿಗೂ ಸಂತಶಿಶುನಾಳಷರೀಫನಿಗೂ ತುಂಬ ಸಾಮ್ಯವಿದೆ

ವಾಕ್ಯಂ ರಸಾತ್ಮಕಂ ಕಾವ್ಯಂ - ಎಂಬ ಸಿದ್ಧಾಂತವಿದೆ ಕಾವ್ಯರಚನೆಯಲ್ಲಿ ಪ್ರಾಧಾನ್ಯ ಅಲಂಕಾರಕ್ಕೋ - ರಸಕ್ಕೋ - ಎಂಬ ಚರ್ಚೆಗೆ ಉತ್ತರವಾಗಿ ಈ ಸಿದ್ಧಾಂತ ಬೆಳಕಿಗೆ ಬಂದಿರಬಹುದು ಕವಿತೆಯಲ್ಲಿ ಧರ್ಮ - ಲೋಕರಕ್ಷಣ - ಭಕ್ತಿ - ಜ್ಞಾನ - ವೈರಾಗ್ಯ ಎಲ್ಲವನ್ನೂ ಹಿತಮಿತವಾಗಿ ಬಳಸಿಕೊಳ್ಳುವ ಕಲೆ ಕೈವಾರದ ಕವಿಗೆ ಕರಗತವಾಗಿದೆ ಪ್ರಕೃತಿ - ದೈವಕೃಪೆ - ಲೋಕಾನುಕಂಪ - ಧರ್ಮಾನುರಾಗ - ಶುದ್ಧಜೀವನ - ಅಂತರ್ಯಾಮಿ ಪರತತ್ವದ ಬಗ್ಗೆ ಶ್ರದ್ಧಾಭಕ್ತಿ ಇವು ಯಾರ ಬಾಳಿನಲ್ಲಿ ಮೂಲಸಾಮಗ್ರಿಯಾಗಿದೆ - ಅಂತಹ ಸಿದ್ಧಪುರುಷರು ನುಡಿದುದೆಲ್ಲ ಕವಿತೆ -

ಬರೆದುದೆಲ್ಲ ಕಾವ್ಯ – ಹಾಡಿದುದೆಲ್ಲ ರಸಮಯ ಸಂಗೀತವಾಗಿರುತ್ತದೆ

ಜಗನ್ಮಾತೆ – ಆದ್ಯಾಶಕ್ತಿ – ಭವತಾರಿಣಿಯನ್ನು ಕುರಿತು ಈ ಕವಿಪುಂಗವ ಅನೇಕ ಕೀರ್ತನೆಗಳನ್ನು ರಚಿಸಿದ್ದಾನೆ ಸಂಗೀತಕ್ಕಾಗಿಯೇ ಹೇಳಿಮಾಡಿಸಿದ ಭಾಷೆಯಾದ ತೆಲುಗಿನಲ್ಲಿ –

ಅಂಬನು ಚೂಡರಮ್ಮ
ಮನ ಜಗದಂಬನು ಚೂಡರಮ್ಮ || ಪ ||

ಅಂಬನು ಚೂಡರೆ – ಅಖಿಲಾಂಡೇಶ್ವರಿ
ಶಂಭುನಿ ಸತಿ ತಾ ಕೊಲುವೈಯುನ್ನದಿ

ಮಂಜುಲು ಕಮ್ಮಲು ಪಾಪಟಬೊಟ್ಟುನು
ಥಳುಕು ಬುಗಡುಲು ತಾಳಿಪದಕಮು
ಚಕ್ಕನಿ ತಲ್ಲಿಕಿ ಮುತ್ಯಪು ಮುಕ್ಕರ
ಪರಮೇಶ್ವರುಸತಿ ಕೊಲುವೈಯುನ್ನದಿ

ಕವಿ ತನ್ನ ಆರಾಧ್ಯದೇವಮೂರ್ತಿ ಅಮರನಾರಾಯಣನಿಗೆ ದಿಟ್ಟವಾಗಿ ಧೈರ್ಯವಾಗಿ ಹೇಳುತ್ತಾನೆ– ಆ ಕಾಲದಲ್ಲಿ ರಾವಣಕುಂಭಕರ್ಣಾದಿಗಳನ್ನು ಕೊಂದು ಕೆಡಹಿದ ನಿನ್ನ ಭುಜಬಲ ಪರಾಕ್ರಮಕ್ಕೆ ನಾನು ಹೆದರುವವನಲ್ಲ ಅವೆಲ್ಲ ನನ್ನಲ್ಲಿ ನಾಗದು ಮತ್ಸ್ಯಾವತಾರದಲ್ಲಿ ನೀರಿನಲ್ಲಿ ಮುಳುಗಿ ರಬಹುದು ಆದರೇನು ಜ್ಞಾನಭಕ್ತಿ ಎಂಬ ಗಾಳ ಹಾಕಿ ನಿನ್ನನ್ನು ಕ್ಷಣಕಾಲದಲ್ಲಿ ಹಿಡಿಯುತ್ತೇನೆ ನನ್ನ ಭಕ್ತಿಯ ಹಿಡಿತಕೆ ಸಿಕ್ಕಿದ ಮೇಲಾಯ್ತು – ನೀನೆಲ್ಲಿ ತಪ್ಪಿಸಿಕೊಂಡು ಹೋಗಲು ಸಾಧ್ಯ?

ಇಕ ಎಂದು ಪೊಯ್ಯೇವು |
ವಿಡುವನು ನೀ ಯಾನ
ಪಗಲು ರೇಯಿಪಟ್ಟು ಪದಲಕ ಯುನ್ನಾನು ||

ಸ್ತ್ರೀ – ಪುರುಷ ಎಂದು ಕೇವಲ ಎರಡು ಜಾತಿ ಗುಂಪು ಇದೆ ಉಳಿದ ಜಾತಿಗಳೆಲ್ಲ ಕಾರಣಾಂತರದಿಂದ ಮಾನವ ತಯಾರಿಸಿದ ವ್ಯವಸ್ಥೆ – ಇದಕ್ಕೆ ಹೆಚ್ಚುಮಹತ್ವ ಕೊಡುವುದು ಅವಿವೇಕ – ಎನ್ನುತ್ತಾನೆ ಈ ಸಿದ್ಧಪುರುಷ ಪ್ರಿಯ ದರ್ಶನಾಕಾಂಕ್ಷೆಯಿಂದ ಪರಿತಪಿಸುವ ವಿರಹಿಯಂತೆ ಭಕ್ತ ಜೀವ ಭಗವಂತನ ದರ್ಶನಕ್ಕೆ ಹಾತೊರೆಯುತ್ತಿದೆ ಆತನಿಗೆ ದಯಬರಬೇಕಲ್ಲ – ಆಗತಾನೆ ಭಾಗ್ಯ" ಈ ಅರ್ಥಕೊಡುವ ಅನೇಕ ಮಧುರ ಕವಿತೆಗಳನ್ನು ರಚಿಸಿದ ಈ ಕವಿಗೆ ಸಂಸ್ಕೃತದ ಪಾಂಡಿತ್ಯ ಪುರಾಣ ಕಥೆಗಳ ಪರಿಚಯ ತುಂಬ ಚೆನ್ನಾಗಿ ಇರಬೇಕು ಕೃಷ್ಣನ ಚೇಷ್ಟೆಗಳನ್ನು ತಾಳಲಾರದೆ ಗೋಪಿಯರು – ಯಶೋದೆಗೆ ದೂರು ಹೇಳುವುದು – ಬೇಸರವಾಗಿ – ಊರು ಬಿಟ್ಟು ಎಲ್ಲಾದರೂ ಹೊರಟುಹೋಗಿ ಹೇಗೋ ಬಾಳುತ್ತೇವೆ ಎನ್ನುವುದು – ಈತನ ಕೆಲವು ಕವಿತೆಗಳ ವಸ್ತು

ಎಂದುಂಡಿ ವಸ್ತಿವಿ ತುಮ್ಮೆದಾ
ಏ ಊರು ನೀ ಊರು ತುಮ್ಮೆದಾ
ಆರುಗುರು ಇದ್ದರು ತುಮ್ಮೆದಾ
(6+2=ಅಷ್ಟಮದಗಳು)
ವಾರುಲಧಿಕ ಬಲಾಢ್ಯುಲು ತುಮ್ಮೆದಾ
ವಾರು ಪ್ರಜ್ಞನು ಚೆಡಿಪೇರು ತುಮ್ಮೆದಾ
ಸುಜ್ಞಾನಿವೈಯುಂಡು ತುಮ್ಮೆದಾ

ಇಂತಹ ಬೋಧಪ್ರದ ಸುಂದರ ಗೀತೆಗಳು ನೂರಾರು ರಚಿಸಿದ್ದಾನೆ ಈ ಕವಿ

ಚಕ್ಕನಿಸಾಮಿ – ಚಿಕ್ಕಕ ಇನ್ನಾಳ್ಳು
ತಪ್ಪಿಂಚುಕೊನಿ ಉನ್ನಾ – ತಾವು ತೆಲಿಸೆನು

ಕನ್ನಡದಲ್ಲೂ ಕೆಲವು ಪದ್ಯಗಳನ್ನು ಈ ಕವಿ ರಚಿಸಿದ್ದಾನೆ–

ಆಲಸ್ಯವೇತಕೋ – ಪಾಲಿಸೆನ್ನ ಹರಿಯೆ
ನಿಮ್ಮ ದಾಸಾನುದಾಸರಿಗೆ
ದಾಸನು ನಾನಯ್ಯಾ || ೧ ||

ನಾಶವಾದರು ಬೇಗ ನೆಂಟರಷ್ಟು
ಈ ದೇಹದಾಮನೆಯಲ್ಲಿ ಇದ್ದ ದುರ್ಜನರು

ಬಾರಯ್ಯಾ ಗೋವಿಂದ –
ಬಂಧನವ ಒಡಿಸೊ
ದೇಹವೆಂಬ ಬಂಡಿ–ಎಳೆದು ಬಳಲಿದೆನೋ

ಮರೆಯಲಾರೆನಮ್ಮ – ರಂಗನ
ಮರೆಯಲಾರೆನೇ ಮಾಗಡಿ ರಂಗನ
ಬೇಡಿದವರಗಳ ಕೊಡುವ ಮಹಾತ್ಮನ

ಇತ್ಯಾದಿ ಅನೇಕ ಪದ್ಯಗಳು ಉದಾಹರಿಸಬಹುದು

ಯಾಲಪದ ಕೋಲಾರ ಜಿಲ್ಲೆಯ ಗ್ರಾಮಾಂತರ ಪ್ರದೇಶಗಳ ಜನಪದ ಸಾಹಿತ್ಯದ ಒಂದು ವಿಶಿಷ್ಟರೀತಿ ನಾರಣಪ್ಪ, ಕೃಷ್ಣ – ಗೋಪಕನ್ಯೆ – ಇವರ ಸರಸಮಧುರ ರಸಿಕ ಸಂಭಾಷಣೆಯನ್ನು – ಯಾಲಪದವಾಗಿ ಆ ಧಾಟಿಯಲ್ಲಿ ರಚಿಸಿದ್ದಾನೆ

ಅಜಭವಾರ್ಚಿತ ಆದಿಕೇಶವ
ಅಂಬುಜೋದರ ಮಾಧವಾ
ಸಜ್ಜನ ಪ್ರಿಯ ಸರಸಿಜೋದ್ಭವ
ಶ್ರೀನಿವಾಸದಯಾನಿಧೇ || ಶರಣು ಶರಣು ||

ಶರಣು ಶ್ರೀಹರಿ ಭಕ್ತಪಾಲನ
ಶರಣುಮುಜ್ಜಗ ಪಾಲನಾ
ಶರಣು ನರಸಖ ಶ್ರೀ ಜನಾರ್ದನ
ಶರಣು ಶ್ರೀದಾಮೋದರಾ || ಶರಣು ||

ಜಯನಮೋ ರಿಪುರಾವಣಾಂತಕ
ಜಯನಮೋ ಸರ್ವಾತ್ಮಕಾ
ಜಯನಮೋ ಶರಣಾರ್ತ ರಕ್ಷಕ
ಜಯನಮೋ ಶ್ರೀರಾಘವಾ || ಶರಣು ||

ಇಂತಹ ಅನೇಕ ಸುಂದರ ರಚನೆಗಳನ್ನು ಹಾಡಿದ ಈ ಭಕ್ತಕವಿ ತಿರುಪತಿ ಶ್ರೀನಿವಾಸನನ್ನು ಸಂದರ್ಶಿಸಿದ್ದಾನೆ – ದಿವ್ಯಾನಂದವನ್ನು ಅನುಭವಿಸಿದ್ದಾನೆ ಆ ಮಧುರಾನಂದಾನುಭೂತಿ – ಈ ಕವಿತೆಯಾಗಿ ಪ್ರವಹಿಸಿದೆ–

ಚೂಡಗಂಟಿ ಸ್ವಾಮಿನಿ ವೇಡುಕೊಂಟಿ ||

ಗಾಲಿಗೋಪುರಮೆಕ್ಕಿ ಜೂಚಿತೆ
ಘಂಟನಾದಮು ಭೇರಿ ಶಬ್ದಮು
ಮೃದಂಗವಾದ್ಯಮು ವೇಣುನಾದಮು
ಕನಕ ಪಲುಕುಲು ಗಿಡಿಬಿಡಂಬುಲು
ಪೆದ್ದ ಬೂರುಗತಮ್ಮಟಂಬುಲು
ಪಾಂಚಜನ್ಯಮು ಬರ್ರಿಂತುತು
ಓಂ ನಮೋ ಅನುವೇದ ಘೋಷಮು
ಮೇಘನಾದಮುತೋನ ವಿನಬಡೆ ||

ಮಕರ ಕುಂಡಲ ಭೂದಣಂಬುಲು
ಮಣುಲಹಾರಮು ಮೇಟಿ ಪದಕಮು
ಎಂದು ಚೂಸಿನ ದೀಟುಲೇನಿದಿ
ಪಸಿಡಿಶಾಲುವ ಪಟ್ಟು ಧೋತಿ
ನುದಟಿ ಕಸ್ತೂರಿ
ಪಟ್ಟೆತಿರುಪಾಣೆ ಪೂತಗಂಧಮು
ಪೂಲಸರಮುಲು
ಉರಮುನನು ಅಲಮೇಲಮಂಗನು
ಅಂದಮುಗ ನಿಡುಕೊನ್ನದೇವುನಿ
– ಜೂಡಗಂಟಿ ||

ಹೀಗೆ ಸುದೀರ್ಘವಾಗಿ ಪ್ರವಹಿಸಿದೆ ಕೈವಾರದ ಕವಿ ಪ್ರತಿಭೆ

***

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅದವಾ ಸುಲಬ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ)ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ ತಿ ದೇ ಪ್ರಕಟಣೆಗಳಾದ ಪುಸ್ತಕಗಳು ದೈವಚಿತ್ರಗಳ ಮಾರಾಟ
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ ಬಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್
* ಯಾತ್ರಿಕರ ವಸ್ತುಗಳು ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿದ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ
* ಪಂಡಾಗಳು ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮.೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦.೩೦ ರಿಂದ ೧.೦೦ ಗಂಟೆಯವರೆಗ ಕೆಲಸಮಾಡುತ್ತದೆ

# ಹುಲಗಿನ ಮುರಡಿ

--ಶ್ರೀಮತಿ ಬಿ ಕೆ ಪುಷ್ಪಲತಾಮೂರ್ತಿ

ಶ್ರೀನಿವಾಸನ ಅವಾಸ ಸ್ಥಾನವಾದ ದಕ್ಷಿಣ ಶೇಷಾದ್ರಿ ಮಹಾತ್ಮವು ವರಾಹ ಪುರಾಣದ ಉತ್ತರ ಕಾಂಡದಲ್ಲಿ ಹೇಳಲ್ಪಟ್ಟಿದೆ ಕರ್ನಾಟಕದಲ್ಲಿನ ಅನೇಕ ಮಹಿಮಾನ್ವಿತ ಕ್ಷೇತ್ರಗಳಲ್ಲಿ ಹುಲಗಿನ ಮುರಡಿ ಕ್ಷೇತ್ರವು ಒಂದು ಸಣ್ಣ ಯಾತ್ರಾ ಸ್ಥಳ ಇದು ಕಾವೇರಿಗೆ ದಕ್ಷಿಣ ಬಾಗದಲ್ಲಿ ಎರಡು ಯೋಜನಗಳ ದೂರದಲ್ಲಿ ಮೈಸೂರು ಜಿಲ್ಲೆ, ಗುಂಡ್ಲುಪೇಟೆ ತಾಲ್ಲೂಕಿನಲ್ಲಿ ದಕ್ಷಿಣ ಶೇಷಾದ್ರಿ ಎಂದು ಬಗವಂತನಿಂದಲೇ ನಿರೂಪಿಸಲ್ಪಟ್ಟಿದ್ದಾಗಿ ಬಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತಾ ಕಂಗೊಳಿಸುತ್ತಿರುವುದು ಇದು ಒಂದೊಂದು ಯುಗದಲ್ಲಿ ಒಂದೊಂದು ನಾಮದಿಂದ ವಿಖ್ಯಾತವಾಗಿದೆ ಈ ಕಲಿಯುಗದಲ್ಲಿ ಹುಲಗಿನ ಮುರಡಿ (ವ್ಯಾಘ್ರಾದ್ರಿ) ಎಂದು ವಿಶೇಷವಾಗಿ ವರ್ಣಿತವಾಗಿದೆ ಈ ಬೆಟ್ಟವು ಮೇರು ಪರ್ವತದ ಶಿಖರ ಶ್ರೀ ನಾರಾಯಣನು ಸಮಸ್ತ ದೇವ ಋಷಿ ಗಣಗಳಿಂದ ಪೂಜೆಗೊಳ್ಳುತ್ತಾ, ತನ್ನ ದಿವ್ಯ ಸಾನ್ನಿಧ್ಯವನ್ನು ಕೃಪೆಗೈಯ್ದಿರುವನು ಇಲ್ಲಿರುವ ಅನೇಕ ತೀರ್ಥಗಳಲ್ಲಿ ಮೂರು ತೀರ್ಥಗಳು ಪುಣ್ಯತಮವಾಗಿ ಪ್ರಸಿದ್ಧಿಯಾಗಿವ

## 1 ಧನುಷ್ಕೋಟಿ ತೀರ್ಥ

ಶ್ರೀ ರಾಮನು ಲಂಕಾಪಟ್ಟಣಕ್ಕೆ ವಿಜಯ ಯಾತ್ರೆಗಾಗಿ ಹೊರಟ ಕಾಲದಲ್ಲಿ ತನ್ನ ಸ್ನಾನಕ್ಕಾಗಿ ದನುಸ್ಸಿನ ಅಗ್ರಹದಿಂದ ಕಲ್ಲು ಬಂಡೆಯನ್ನು ಒಡೆದು ಈ ತೀರ್ಥವನ್ನು ನಿರ್ಮಿಸಿದನು ಈ ಪುಣ್ಯತೀರ್ಥವು ಬೆಟ್ಟದ ಮೇಲ ಸ್ವಾಮಿಯ ಪಶ್ಚಿಮಕ್ಕೆ ಪುಣ್ಯವರ್ದನ ವಿಮಾನ ಛಾಯೆಯಲ್ಲಿ ಕಂಗೊಳಿಸುತ್ತಿರುವುದು ಇದರಲ್ಲಿ ಸ್ನಾನ ಮಾಡಿದವರಿಗೆ ಸಕಲ ಇಷ್ಟಾರ್ಥಗಳೂ ಫಲಿಸುವವು.

## 2 ವೇದ ಪುಷ್ಕರಿಣೀ ತೀರ್ಥ

ಇದು ದನುಷ್ಕೋಟಿ ತೀರ್ಥಕ್ಕೆ ಉತ್ತರ ಬಾಗದಲ್ಲಿದೆ ಸೃಷ್ಟ್ಯಾದ್ರಿಯಲ್ಲಿ ಪರಮಪುರುಷನು ವೇದಗಳನ್ನು ಅಪಹರಿಸಿಕೊಂಡು ಹೋಗಿದ್ದ ಸೋಮಕನೆಂಬ ರಾಕ್ಷಸನನ್ನು ಮತ್ಸ್ಯರೂಪಿನಿಂದ ಕೊಂದು, ಹಯಗ್ರೀವ ರೂಪಿನಿಂದ ಸಕಲ ವೇದಗಳನ್ನು ಸಂಗ್ರಹಿಸಿ, ಹಂಸರೂಪಿನಿಂದ ವೇದಗಳನ್ನು ಬ್ರಹ್ಮನಿಗೆ ಉಪದೇಶಿಸಿದನು ಆಗ ಆಯಾಸಗೊಂಡ ಅವರ ಶರೀರದ ಬೆವರಿನಿಂದ ಉಂಟಾದ ಈ ತೀರ್ಥಕ್ಕೆವೇದ ಪುಷ್ಕರಿಣಿ ಎಂದು ಹೆಸರಾಯಿತು

## 3 ವೈಕುಂಠತೀರ್ಥ

ಇದು ವೇದ ಪುಷ್ಕರಣಿಗೆ ಒಂದು ಹರಿದಾರಿಯ ದೂರದಲ್ಲಿ ಮನೋಹರವಾದ ವಿರಾಜ ತೀರ್ಥವೆಂದು ಕಂಗೊಳಿಸುತ್ತಿದೆ ಇದು ಶ್ರೀ ವೈಕುಂಠಾದೀಶನಿಂದ ನಿರ್ಮಿತವಾದ ಕಾರಣ ಇದು ವೈಕುಂಠ ತೀರ್ಥವೆಂದೇ ಪ್ರಸಿದ್ಧಿಯಾಗಿದೆ ಇದರಲ್ಲಿನ ಸ್ನಾನವು ಆಶೆಯ ಫಲವನ್ನು ಕೊಡುವಂತದ್ದಾಗಿದೆ

## ಶ್ರೀಮನ್ನಾರಾಯಣನು ಇಲ್ಲಿ ನೆಲಸಿದ ಕಥೆ

ಪೂರ್ವದಲ್ಲಿ ಮಾಂಡವ್ಯರೆಂಬ ಋಷಿಗಳು ಶ್ರೀ ಮನ್ನಾರಾಯಣನ ಸಾನ್ನಿಧ್ಯವನ್ನು ಪಡೆಯಲು ಪುಷ್ಕರವೆಂಬ ದಿವ್ಯ ಕ್ಷೇತ್ರದಲ್ಲಿ ಜಿತೇಂದ್ರಿಯರಾಗಿ ಘೋರತರವಾದ ತಪಸ್ಸನ್ನೆಸಗಿದರೂ ತಮ್ಮ ಇಷ್ಟಾರ್ಥವು ಸಿದ್ಧಿಸಲಿಲ್ಲ ಅವರು ಆಗ ಆ ಪುಷ್ಕರ ಕ್ಷೇತ್ರವನ್ನು ಬಿಟ್ಟು ವೆಂಕಟಾದ್ರಿ (ತಿರುಪತಿ) ಯಲ್ಲಿ ಮಹತ್ತರವಾದ ತಪಸ್ಸು ಮಾಡಿದರು ಶ್ರೀ ಶ್ರೀನಿವಾಸನು ಅವರ ತಪಸ್ಸಿಗೆ ಮೆಚ್ಚಿ ಸಂತುಷ್ಟನಾಗಿ ವೃದ್ಧ ಬ್ರಾಹ್ಮಣ ವೇಷದಿಂದ ಅವರೆದುರು ಪ್ರಕಟವಾಗಿ ಅವರ ಇಷ್ಟಾರ್ಥವು ಸಿದ್ಧಿಸಲು ಹುಲುಗಿನ ಮುರಡಿ ಕ್ಷೇತ್ರದಲ್ಲಿ ಅಷ್ಟಾಕ್ಷರ ಪೂರ್ವಕ ಭಕ್ತಿಯಿಂದ ತಪಸ್ಸು ಮಾಡಿದರೆ ಅವರ ಇಷ್ಟದಂತೆ ತನ್ನ ದಿವ್ಯ ಸಾನ್ನಿಧ್ಯವನ್ನು ದಯಪಾಲಿಸುವೆನೆಂದು ಹೇಳಿ ಅಂತರ್ಧಾನನಾದನು ಅನಂತರ ಮಾಂಡವ್ಯ ಋಷಿಗಳು ಆ ಬ್ರಾಹ್ಮಣನು ಭಗವಂತನೆಂದೇ ಭಾವಿಸಿ ಆತನ ಆಜ್ಞೆಯಂತೆ ಈ ಕ್ಷೇತ್ರಕ್ಕೆ ಬಂದು ಬಕ್ತಿಯಿಂದ ತಪವಂಗೈಯಲು ಸ್ವಲ್ಪಕಾಲದಲ್ಲಿಯೇ ಅವರ ತಪಸ್ಸಿಗೆ ಮೆಚ್ಚಿ ಅಲ್ಲಿ ಶ್ರೀನಿವಾಸನಾಗಿ ಸಕಲ ಬಕ್ತ ವೃಂದದೊಡನೆ ಪುಣ್ಯ ವರ್ಧನ ವಿಮಾನದಲ್ಲಿ ಪ್ರತ್ಯಕ್ಷನಾದನು ಸ್ವಾಮಿಯನ್ನು ಕಂಡೊಡನೆಯೇ ಮಾಂಡವ್ಯರು ಪರಮ ಬಕ್ತಿಯಿಂದ, ದೀರ್ಘದಂಡ ನಮಸ್ಕಾರಗಳನ್ನಸಗಿ ಆತನನ್ನು ವೇದಗಳಿಂದ ಸ್ತುತಿಸಿದರು ಶ್ರೀನಿವಾಸನು ಅವರ ಸ್ತೋತ್ರದಿಂದ ಪರಮಾನಂದ ಹೊಂದಿ ಅವರ ಪ್ರಾರ್ಥನೆಯಂತೆ ಅವರಿಂದ ನಿತ್ಯಾರಾಧನೆಯನ್ನು ಅಂಗೀಕರಿಸುತ್ತಾ, ಆ ಪರ್ವತದಲ್ಲಿಯೇ ವಿಗ್ರಹ ರೂಪದಿಂದ ಬೂದೇವಿ ಮತ್ತು ನೀಳಾದೇವಿಯರೊಡನೆ ತನ್ನ ದಿವ್ಯ ಸಾನ್ನಿಧ್ಯವನ್ನು ಕೃಪಗೈಯ್ದಿರುವುದಾಗಿ ವರವನ್ನು ಕೊಟ್ಟು ಅಂತರ್ಧಾನನಾದನು ನಂತರ ಮಾಂಡವ್ಯ ಋಷಿಗಳು ಅನೇಕ ಋಷಿಗಣಗಳಿಂದಲೂ ಬಕ್ತರಿಂದಲೂ ಒಡಗೂಡಿ ಬಾದ್ರಪದ ಮಾಸದ ಶುಕ್ಲಪಕ್ಷದ ಶ್ರಾವಣ ನಕ್ಷತ್ರ ದೊಳಗೆ ತಮಗೆ ಪ್ರತ್ಯಕ್ಷನಾದ ಸ್ಥಳದಲ್ಲಿ ಬೂದೇವಿ, ನೀಳಾದೇವಿಯರ ಸಮೇತ ಶ್ರೀ ಶ್ರೀನಿವಾಸನನ್ನು ಪ್ರತಿಷ್ಠಾಪಿಸಿದರು ಅಂದಿನಿಂದ ಇದು ದಕ್ಷಿಣ ಶೇಷಾದ್ರಿ ಎಂದು ಪ್ರಖ್ಯಾತಗೊಂಡಿತು ಬ್ರಹ್ಮನು ದೇವರ್ಷಿಗಳೊಡನ ಶ್ರೀನಿವಾಸನಿಗೆ ಮಹೋತ್ಸವವನ್ನೆಸಗಿದನು ಯಾವ ಬಾಣದಿಂದ ಶ್ರೀರಾಮನು ಬಂಡಯನ್ನೊಡದು ದನುಷ್ಕೋಟಿ ತೀರ್ಥವನ್ನೆಸಗಿದನೋ ಆ ಬಾಣವು ದನುಸ್ಸಿನೊಡನೆ ಅದ್ಯಾಪಿ ಅಲ್ಲಿ ಕಂಗೊಳಿಸುತ್ತಲಿರುವುದು

## ಅಗಸ್ತ್ಯ ಮಹರ್ಷಿಯ ಶಾಪ ಪರಿಹಾರ

ಪೂರ್ವದಲ್ಲಿ ಪಾರ್ವತೀ ಪರಮೇಶ್ವರ ವಿವಾಹ ಮಹೋತ್ಸವವು ನಡಯಲು ಉಪಕ್ರಮವಾಯಿತು ಈ ಮಹೋತ್ಸವಕ್ಕೆ ಸಕಲ ದೇವತೆಗಳೂ, ದೇವರ್ಷಿಗಳೂ, ಬ್ರಹ್ಮರ್ಷಿಗಳೂ, ರಾಜರ್ಷಿಗಳೂ, ದೈತ್ಯದಾನವರ ಸಮೂಹವೂ ಒಂದೆಡೆ ಸೇರಲು, ಇವರ ಭಾರದಿಂದ ಬೂಮಿಯ ಉತ್ತರ ಬಾಗವು ಹಡಗಿನಂತೆ ಕೆಳಗಿಳಿದು ದಕ್ಷಿಣ ಬಾಗವು ಮೇಲಕ್ಕೆ ಎದ್ದು ಬಿಟ್ಟಿತು ಆಕಸ್ಮಿಕವಾಗಿ ಉಂಟಾದ ಈ ಅನರ್ಥಕ್ಕೆ ಎಲ್ಲರೂ ಹೆದರಿ ಚಿಂತಿಸುವಾಗ ವಿಶ್ವಕರ್ಮನು ಇಂದ್ರಾದಿ ದೇವತೆಗಳನ್ನು ಕುರಿತು ಭಯಪಡಬೇಡಿರಿ ಮಹಾ

ತ್ಮರಾದ ಅಗಸ್ತ್ಯ ಮುನಿಗಳು, ಮೂರು ಲೋಕಗಳ ಭಾರಕ್ಕೆ ಸಮನಾಗಿರುವುದರಿಂದ, ಅವರನ್ನು ಭೂಮಿಯ ದಕ್ಷಿಣ ಬಾಗಕ್ಕೆ ಕಳುಹಿಸಿದರೆ ಭೂಮಿಯು ಉಭಯ ಪಾರ್ಶ್ವದಲ್ಲೂ ಸಮಭಾರವನ್ನು ಪಡೆದು ಈ ಲೊ.ಕಕ್ಕಾದ ಭಯವುನಿವೃತ್ತವಾಗುವುದು ಎಂದು ಹೇಳಿದನು ಆಗ ಸಕಲರೂ ಮಹರ್ಷಿಯನ್ನು ಭಕ್ತಿಯಿಂದ ಪ್ರಾರ್ದಿಸಿದರು ಅಗಸ್ತ್ಯರು ಕೋಪಗೊಂಡು ಈ ವಿಶ್ವಕರ್ಮನಿಂದ ಪಾರ್ವತೀ ಪರಮೇಶ್ವರರ ಕಲ್ಯಾಣ ಮಹೋತ್ಸವವನ್ನು ನೋಡುವುದು ತಪ್ಪಿಹೋದುದಕ್ಕಾಗಿ ಆತನನ್ನು ಈ ರಿ.ತಿ ಶಪಿಸಿದರು - ನಿನ್ನವರಲ್ಲ ಬೂಲೋಕದಲ್ಲಿ ಹುಟ್ಟು ವಿರು ಅದನ್ನು ಕೇಳಿದ ವಿಶ್ವಕರ್ಮನು ಅದಿಕವಾದ ಕೋಪಗೊಂಡವನಾಗಿ ನಾನು ಲೋಕಕಲ್ಯಾಣಕ್ಕಾಗಿ ಹೇಳಿದನೇ ಹೊರತು ನೀವು ಕಲ್ಯಾಣವನ್ನು ನೋಡಬಾರದೆಂಬ ಉದ್ದೇಶದಿಂದಲ್ಲ, ಆದರೂ ನೀವು ಸ್ವಲ್ಪವೂ ಯೋಚಿಸದೆ ನನಗೆ ಶಾಪಕೊಟ್ಟಿದ್ದರಿಂದ ನಾನು ನಿಮ್ಮನ್ನೂ ಶಪಿಸುತ್ತೇನೆ ನೀವು ಮಹರ್ಷಿಯಾಗಿದ್ದರೂ ರಾಜನ ಪಲ್ಲಕ್ಕಿಯನ್ನು ,ಹೊ ರುವಂತಾಗಲಿ -- ಎಂದರು ಇವರಿಬ್ಬರ ಕಲಹವನ್ನು ಶಾಂತಗೊಳಿಸಿ ಇಂದ್ರಾದಿಗಳು ಅಗಸ್ತ್ಯರನ್ನು ಬಹುವಿದವಾಗಿ ಪ್ರಾರ್ದಿಸಿ ಅವರನ್ನು ದಕ್ಷಿಣ ದಿಕ್ಕಿಗೆ ಕಳುಹಿಸಿಕೊಟ್ಟರು ಬೇರೆ ಯತ್ನವಿಲ್ಲದೆ ಅವರ ಪ್ರಾರ್ದನೆಯನ್ನು ಅಂಗೀಕರಿಸಿ ದಕ್ಷಿಣ ದಿಕ್ಕಿನ ಕಡೆ ಹೊರಟರು ಮಾರ್ಗ ಮದ್ಯದಲ್ಲಿ ಅವರ ಶಿಷ್ಯನಾದ ವಿಂದ್ಯಾಚಲನು ಅವರಿಗೆ ನಮಸ್ಕಾರ ಮಾಡಲು ಬಗ್ಗಿದನು ಸೂರ್ಯನೇತ್ತರಕ್ಕೂ ಬೆಳೆ ದಿದ್ದ ವಿಂದ್ಯಾಚಲನನ್ನು ನೋಡಿ ಮುಂದೆ ಇದರಿಂದ ತೊಂದರೆ ಬರಬಹುದೆಂದು ಭಾವಿಸಿ ಮತ್ತೆ ನಾನು ಬರುವವರೆಗೂ ನೀನು ಹೀಗೆ ಇರು ಎಂದು ಆಶೀರ್ವಾದ ಮಾಡಿ ಈ ಕಡೆ ಬಂದು ಬಿಟ್ಟರು

ಹೀಗೆ ದಕ್ಷಿಣ ದಿಕ್ಕಿನಲ್ಲಿ ಸಂಚಾರ ಮಾಡುತ್ತ ಅಲ್ಲಿರುವಂತ ತೀರ್ದ ಕ್ಷೇತ್ರಗಳನ್ನು ಸಂದರ್ಶಿಸುತ್ತಾ, ಅಕಸ್ಮಿಕವಾಗಿ ಈ ದಕ್ಷಿಣ ಶೇಷಾದ್ರಿಯನ್ನು ಸಂದಿಸಿದರು ಆಗ ಅಲ್ಲಿ ವ್ಯಾಘ್ರಾಸುರನೆಂಬ ರಾಕ್ಷಸನು ಬಹಳ ಘೋರನಾಗಿದ್ದನು ಅವನು ಅಗಸ್ತ್ಯರನ್ನು ಕೆಣಕಲು ಅವರು ಅವನಿಗೆ ವ್ಯಾಘ್ರವಾಗಿ ಹೋಗೆಂದು ಶಪಿಸಿದರು ಅನಂತರ ಅಲ್ಲಿರುವ ವೇದ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ಶ್ರೀ ಶ್ರೀನಿವಾಸನ್ನು ಸೇವಿಸಿ ವಿಶ್ವಕರ್ಮನ ಶಾಪವನ್ನು ಪರಿಹರಿಸಿಕೊಳ್ಳುವುದ್ದಾಗಿ ಆ ಪುಣ್ಯಾಶ್ರಮದಲ್ಲಿ ಮಹತ್ತರವಾದ ತಪಸ್ಸನ್ನಾಚರಿಸಿದನು ಇವರ ತಪಸ್ಸಿನಿಂದ ಸಂತುಷ್ಟನಾದ ಶ್ರೀನಿವಾಸನು ಗರುಡಾರೂಢನಾಗಿ ಪ್ರತ್ಯಕ್ಷನಾಗಲು ಅಗಸ್ತ್ಯರು ಅದಿಕವಾದ ಭಕ್ತಿಯೊಡನೆ ಬಹುವಿದವಾಗಿ ಆತನನ್ನು ಸ್ತೋತ್ರ ಮಾಡಿದರು ಅವರ ಸ್ತೋತ್ರದಿಂದ ಸಂತುಷ್ಟನಾದ ಶ್ರೀನಿವಾಸನು 'ಎಲೈ ಅಗಸ್ತ್ಯ ಋಷಿಯೇ, ನಿನ್ನ ತಪಸ್ಸಿನಿಂದಲೂ ಸ್ತೋತ್ರದಿಂದಲೂ ಸಂತುಷ್ಟನಾಗಿರುವೆನು ವಿಶ್ವಕರ್ಮನ ಶಾಪಕ್ಕಾಗಿ ವ್ಯಸನಪಡಬೇಡ, ನಿನ್ನ ದ್ರಾವಿಡ ಭಾಷೆಯ ಸಂಸ್ಕೃತ ಭಾಷೆಯಂತೆ ಪವಿತ್ರವಾಗಿ ಆಗಲಿ ದ್ರಾವಿಡ ದೇಶದೊಳಗೆ ತಾಮ್ರಪರ್ಣಿ ನದೀತೀರದ ಕುರಿಕಾನಗರದಲ್ಲಿ ನಾನು ಶಠಕೋಪ (ನಮ್ಮಾಳ್ವಾರ್) ಎಂಬ ಹೆಸರಿನಿಂದ ಅವತಾರ ಮಾಡಿ ವೇದಾಂತ ಸಾರ ತತ್ತ್ವಾರ್ದವನ್ನೆಲ್ಲಾ ದ್ರಾವಿಡ ಭಾಷೆಯಿಂದ ಸಹಸ್ರಗಾಥಾರೂಪವಾಗಿ ರಚಿಸುತ್ತೇನೆ ಅದು ವೇದಕ್ಕೆ ಸಮಾನಾಗುವುದು ವೈಕುಂಠವಾಸಿಗಳೆಲ್ಲಾ ನನ್ನ ಶಂಖಚಕ್ರ ಗದಾ ಶಾರ್ಙ್ಗಗಳೆಂಬ ಆಯುದಗಳೂ ಶ್ರೀವತ್ಸ, ಕೌಸ್ತುಭ, ವನಮಾಲೆಗಳೂ ಸಹ ಬೂಲೋಕದಲ್ಲಿ ನಾನಾ ಜಾತಿಗಳೊಳಗೆ ನನ್ನಂತೆಯೇ ಅವತರಿಸಿ ಶಾಸ್ತ್ರ ತತ್ವಗಳನ್ನು ದ್ರಾವಿಡ ಬಾಷೆಯಲ್ಲಿ ವ್ಯಕ್ತಪಡಿಸುತ್ತಾರೆ ನನ್ನಿಂದಲೂ ಅವರಿಂದಲೂ ರಚಿತವಾದ ದ್ರಾವಿಡ ಬಾಷೆಯ ದಿವ್ಯ ಪ್ರಬಂದಗಳು ನಾಲ್ಕು ಸಾವಿರಗಳಾಗುವುವು ನನ್ನ ಬಕ್ತರಾದ ವೈಷ್ಣವರೆಲ್ಲರೂ ದ್ರಾವಿಡ ವೇದದಲ್ಲಿ ಪಾರಂಗತರಾಗುವರು ಸಂಸ್ಕೃತ ವೇದಗಳಂತೆ ದ್ರಾವಿಡ ವೇದಗಳು, ಪವಿತ್ರ ತಮಗಳಾಗುವುವು ನನ್ನ ಬಕ್ತರಾದ ಶ್ರೀ ವೈಷ್ಣವರು ಈ ಉಬಯ ವೇದಾಂತಗಳನ್ನು ಅದಿಕರಿಸಲೇಬೇಕು ತಾಪ ಪುಂಡ್ರಾದಿ ಪಂಚ ಸಂಸ್ಕಾರಗಳಿಂದಲೂ ದ್ರಾವಿಡ ವೇದಪಾರದಿಂದಲೂ ವೈಷ್ಣವತ್ವವು ಸಿದ್ಧಿಸುವುದು ಇದರಿಂದ ಅಗಸ್ತ್ಯನು ಅತ್ಯಂತ ಸಂತುಷ್ಟನಾಗಿ ಅಲ್ಲಿನ ತೀರ್ದ ಸ್ನಾನ ಪ್ರಬಾವದಿಂದ ಸರ್ವಸಿದ್ಧಿಯನ್ನು ಪಡೆದು ಅಲ್ಲಿಂದ ಮಲಯ ಪರ್ವತಕ್ಕೆ ಹೊರಟು ಹೋದನು ಪಾಂಡವರೂ ಸಹ ಅರಗಿನ ಮನೆಯಿಂದ ತಪ್ಪಿಸಿಕೊಂಡು ಕಾಡು ಸೇರಿದಾಗ ಆಕಾಶವಾಣಿಯಾಯಿತು, ಏನೆಂದರೆ 'ಯುದಿಷ್ಠಿರನೇ ಇಲ್ಲಿಂದ ನೀನು ದಕ್ಷಿಣ ಶೇಷಾದ್ರಿಗೆ ಹೋಗಿ ಅಲ್ಲಿ ಶ್ರೀನಿವಾಸನನ್ನು ಆರಾದಿಸಿ, ಆತನ ಅನುಗ್ರಹವನ್ನು ಪಡೆದರೆ ನಿನಗೆ ಮುಂದೆ ಶ್ರೇಯಸ್ಸಾಗುವುದು' ಎಂದು ಹೇಳಿತು ಅದನ್ನು ಕೇಳಿ ದರ್ಮರಾಜನು ಸಂತೋಷಗೊಂಡು ತನ್ನ ತಾಯಿಯೊಡನೆಯೂ ಸಹೋದರರೊಡನೆಯೂ ದಕ್ಷಿಣ ಶೇಷಾದ್ರಿಗೆ ಬಂದು ಅಲ್ಲಿ ದನುಷ್ಕೋಟಿ ತೀರ್ದದಲ್ಲಿ ಸ್ನಾನ ಮಾಡಿ ಪರಮ ಬಕ್ತಿಯಿಂದ ಶ್ರೀನಿವಾಸನನ್ನು ಆರಾದಿಸಿ ಪ್ರಾರ್ದಿಸಿಕೊಳ್ಳಲು ಆತನ ಭಕ್ತಿಗೂ ಸ್ತೋತ್ರಕ್ಕೂ ಶ್ರೀನಿವಾಸನು ಪ್ರಸನ್ನನಾಗಿ 'ಎಲೈ ರಾಜನೇ ನಿನ್ನ ಭಕ್ತಿಗೆ ನಾನು ಸಂತುಷ್ಟನಾದೆನು, ನಿನ್ನ ಕಷ್ಟವು ಇಲ್ಲಿಗೆ ಕೊನೆಗೊಂಡಿರುವುದು, ಇನ್ನು ಮುಂದೆ ನಿನಗೆ ಶ್ರೇಯಸ್ಸಾಗುವುದು' ಎಂದು ಹೇಳಲು ದರ್ಮರಾಜನು ಪರಮಪುರುಷನ ಈ ವಾಕ್ಯದಿಂದ ಸಂತೋಷಗೊಂಡು ಮಾತೃ ಭ್ರಾತೃಗಳೊಡನೆ ಅಲ್ಲಿಂದ ಹೊರಟು ದ್ರೌಪದಿ ವಿವಾಹ, ರಾಜ್ಯಪ್ರಾಪ್ತಿ ರೂಪಗಳಾದ ಇಷ್ಟಾರ್ದಗಳನ್ನು ಪಡೆದರು

## ನಾಲ್ಕು ಹೆಸರುಗಳು ಉಂಟಾದ ಕದೆಗಳು

ಪೂರ್ವದಲ್ಲಿ ಆದಿಶೇಷನಿಗೂ ವಾಯುವಿಗೂ ತಮ್ಮಿಬ್ಬರೊಳಗೆ ಬಲದಲ್ಲಿ ಯಾರು ಹೆಚ್ಚೆಂಬ ವಿಷಯದಲ್ಲಿ ವಾದ ಉಂಟಾಗಿ ತಮ್ಮ ಬಲ ಪರೀಕ್ಷೆಗಾಗಿ ಮೇರು ಪರ್ವತಕ್ಕೆ ಹೋದರು, ಸುವರ್ಣ

## ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ ಓ ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ ತಿ ದೇ ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ ತಿ ದೇ ತಿರುಪತಿ ಇವರ ಹೆಸರಿನಲ್ಲಿ ಡಿ ಡಿ ಯನ್ನು ಕಳುಹಿಸಬೇಕು ಡಿ ಡಿ ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್**
(ರಿಸೆಪ್ಷನ್) ತಿ ತಿ ದೇ ತಿರುಪತಿ

ುಯವಾದ ಆ ಪರ್ವತದ ಶಿಖರವನ್ನು ಆದಿಶೇ
ೃನು ಬಲವಾಗಿ ಸುತ್ತಿಕೊಂಡು "ನನ್ನ ಈ ಕಟ್ಟನ್ನು ಿಡಿಸಿದರೆ ನೀನೇ ಶೂರನು" ಎಂದು ವಾಯು ಾಗ ಹೇಳಿದನು ವಾಯುವು ಎಷ್ಟು ಪ್ರಯತ್ನಿಸಿ ದರೂ ಆದಿ ಶೇಷನ ಕಟ್ಟನ್ನು ಬಿಡಿಸಲಾಗಲಿಲ್ಲ ಾಗ ವಾಯುವು ಆ ಮೇರು ಪರ್ವತದ ಶಿಖ ರವನ್ನು ಮುರಿಯುವಂತೆ ಮಾಡಿ ಆಕಾಶದಲ್ಲಿ ಾರಗಿರನೆ ಸುತ್ತಿಸಿ ನೆಲದ ಮೇಲೆ ಕೆಡವಿದನು ಾಗ ಪರ್ವತ ಶಿಖರವು ಎರಡು ಬಾಗವಾಗಿ ಸೀಳಿ ಹೋಯಿತು ಆಗ ಆದಿಶೇಷನು ಬಹಳ ಸಿಟ್ಟಿ ನೊಡನೆ ಮುರಿದು ಹೋದ ಶಿಖರಲ್ಲಿನ ತನ್ನ ಟ್ಟನ್ನು ಬಿಚ್ಚಿ ಬಿಟ್ಟನು ಆ ಎರಡು ಹೋಳು ಗಳಲ್ಲಿ ಒಂದು ಹೋಳು ವೃಷಾದ್ರಿ (ತಿರುಪತಿ) ಎನಿಸಿಕೊಂಡಿತು ಆ ವೃಷಾದ್ರಿಯಲ್ಲಿ ವಾಯುವು ಮಹತ್ತರ ತಪಸ್ಸು ಮಾಡಿ ಸಿದ್ದಿಯನ್ನು ಪಡೆದನು ಎರಡನೆಯ ಹೋಳು ದಕ್ಷಿಣ ಶೇಷಾದ್ರಿ (ಹುಲ ಿನ ಮರಡಿ) ಎನಿಸಿಕೊಂಡಿತು ತಾನು ಸೋತೆ ನೆಂಬ ಅದಿಕವಾದ ಚಿಂತೆಯಿಂದ ಆದಿಶೇಷನು ದಕ್ಷಿಣ ಶೇಷಾದ್ರಿಯಲ್ಲಿ ಮಹತ್ತರವಾಗಿ ತಪಸ್ಸು ಮಾಡಿದನು ಶ್ರೀನಿವಾಸನು ಆದಿಶೇಷನ ತಪ ಸ್ಸಿಗೆ ಸಂತುಷ್ಟನಾಗಿ ಅದ್ಭುತರೂಪದಿಂದ ಆತ ನಿಗೆ ಪ್ರತ್ಯಕ್ಷನಾದನು ಆ ಪರಮಪುರುಷನನ್ನು ಆದಿಶೇಷನು ಸಂತೋಷದಿಂದ ಸೇವಿಸಿ ಸ್ತೋತ್ರ ಮಾಡಿದನು ಆತನ ಸ್ತೋತ್ರಕ್ಕೆ ತೃಪ್ತಿಗೊಂಡ ನೊಂದು ದಿವಸ ಈ ದಕ್ಷಿಣ ಶೇಷಾದ್ರಿಗೆ ಅಕಸ್ಮಿಕ ವಾಗಿ ಬಂದು ಜನ ಶೂನ್ಯವಾದ ಒಂದು ಮಂಟ ಪದಲ್ಲಿ ದೂಳನ್ನು ನನ್ನ ಬಟ್ಟೆಯಿಂದ ಗುಡಿಸಿ, ಒಂದು ದೀಪವನ್ನು ಹಚ್ಚಿದೆನು
ಜನ್ಮಜನ್ಮಾಂತರಗಳಲ್ಲಿ ನಾನು ಮಾಡಿದ ಪಾಪಗ ಳೆಲ್ಲ ಆ ಕ್ಷಣದಲ್ಲಿಯೇ ನಾಶವಾಗಿ ಹೋದವು ಆ ಕತ್ತಲಿನಲ್ಲಿ ಜನರು ನನ್ನನ್ನು ಕಳ್ಳನೆಂದು ತಿಳಿದು ಕೊಂದು ಹಾಕಿದರು ಆಗ ನಾನು ದಿವ್ಯ ವಿಮಾನ ವನ್ನು ಹತ್ತಿ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಬಹು ಕಾಲ ದಿವ್ಯ ಬೋಗಗಳನ್ನು ಅನುಬವಿಸಿ ಈಗ ಯದುವಂಶದ ರಾಜನಾಗಿ ಹುಟ್ಟಿದೆನು ಆ ಜನ್ಮಾಂತರದ ಪುಣ್ಯ ವಿಶೇಷದಿಂದ ಶ್ರೀನಿವಾಸ ನಲ್ಲಿ ದೃಢ ಭಕ್ತಿಯುಂಟಾಯಿತು ಎಲೈ ವೀತಿ ಹೋತ್ರನೆ, ನನ್ನ ಸ್ವಾರ್ದಕ್ಕಾಗಿ ಮಾಡಿಕೊಂಡ ಆ ಕೃತ್ಯವು ಇಂತಹ ಮಹತ್ಫಲ ಕೊಟ್ಟಿರುವಾಗ ಈಗ ತಿಳಿದೂ ನನ್ನ ಕೈಯಾರೆ ಆ ಸ್ವಾಮಿಗೆ ಮಾಡುವ ಸೇವೆಯ ಪುಣ್ಯವನ್ನು ಕೇಳಬೇಕೆ? ಆದ್ದರಿಂದ ನಿತ್ಯವು ನಾನೇ ಸ್ವತ ದೇವಾಲಯವನ್ನು ಗುಡಿಸಿ ದೀಪ ಹಚ್ಚುತ್ತಿರುವೆನು'

ಈ ಪ್ರಭಾವದಿಂದ ಹಾಗೂ ದೀಪ ಹಚ್ಚಿದು ದರ ಪರಿಣಾಮವಾಗಿ ಬೆಂಕಿಯಲ್ಲಿ ವಸ್ತುಗಳು ಸುಟ್ಟುನಾಶವಾಗುವಂತೆ ಮಾಡಿದ ಪಾಪಗಳೆಲ್ಲ ಪರಿಹಾರವಾಗಿ ಮೊಕ್ಷ ದೊರೆಯುವ ಸ್ಥಳವಾ ಗಿರುತ್ತದೆ

## ಪ್ರದಕ್ಷಿಣೆ ಮಹಿಮೆ

ಹಿಂದೆ ದೇವೇಂದ್ರನು ಒಮ್ಮೆ ಅಸುರರಿಂದ ಪರಾಜಿತನಾಗಿ ರಾಜ್ಯ ಭ್ರಷ್ಟನಾಗಿರುವಾಗ ಸುದ ರ್ಮನೆಂಬ ರಾಜನನ್ನು ಕಂಡನು ಅವನ ರಾಜ್ಯವು ಸಕಲ ಸಂಪತ್ತಿನಿಂದ ಕೂಡಿದ್ದಾಗಿಯೂ ಇತ್ತು ಸುದರ್ಮನು ದೇವೇಂದ್ರನನ್ನು ಪೂಜಿ ಸಲು ಆತನನ್ನು ಕುರಿತು 'ಎಲೈ ಸುದರ್ಮನೆ, ಯಾವ ಪುಣ್ಯ ಪ್ರಬಾವದಿಂದ ಇಂತಹ ಮಹದೈ ಶ್ವರ್ಯವು ನಿನಗೆ ದೊರಕಿದೆ?' ಎಂದು ಕೇಳಲು ಆಗ ರಾಜನು ದೇವೇಂದ್ರನನ್ನು ಕುರಿತು "ಎಲೈ ದೇವೇಂದ್ರನೇ, ದಕ್ಷಿಣ ಶೇಷಾದ್ರಿ ನಿಲಯನಾದ ಶ್ರೀನಿವಾಸನ ಅನುಗ್ರಹದಿಂದ ನನಗೆ ನನ್ನ ಜನ್ಮಾಂ ತರ ಸ್ಥಿತಿಯು ಜ್ಞಾಪಕಕ್ಕೆ ಬಂದಿರುವುದು, ನಾನು ಪೂರ್ವದಲ್ಲಿ ಮಹಾ ಪಾಪಿಷ್ಟನಾಗಿದ್ದುದರಿಂದ ಹದ್ದಾಗಿ ಹುಟ್ಟಿದ್ದೆನು ಆಗ ದಕ್ಷಿಣ ಶೇಷಾದ್ರಿಯ ಕಾಡಿನಲ್ಲಿಯೇ ಸಂಚಾರಿಸುತ್ತಾ ಒಂದು ಸಾಯಂ ಕಾಲದಲ್ಲಿ ದೇವಾಲಯದ ಉಪ್ಪರಿಗೆಯ ಮೇಲೆ ಕುಳಿತಿರಲು ಒಬ್ಬ ಬೇಡನು ನನ್ನನ್ನು ಬಾಣದಿಂದ ಹೊಡೆದು ಬಿಟ್ಟನು ಕೆಳಕ್ಕೆ ಬಿದ್ದ ನನ್ನನ್ನು ಒಂದು ನಾಯಿಯು ಕಚ್ಚಿಕೊಂಡು ಶ್ರೀನಿವಾಸನ ಪುಣ್ಯವ ರ್ದನವೆಂಬ ವಿಮಾನವನ್ನು ಸುತ್ತುತ್ತಾ ಮೂರು ಸಲ ಪ್ರದಕ್ಷಿಣಾಕಾರವಾಗಿ ಓಡಿ ಹೋಯಿತು ಅಷ್ಟು ಮಾತ್ರಕ್ಕೆ ಆ ಪರಮಪುರುಷನು ಸಂತುಷ್ಟ ನಾಗಿ ನನಗೂ ನಾಯಿಗೂ ಅತ್ಯುತ್ತಮವಾದ ಗತಿ ಯನ್ನು ಅನುಗ್ರಹಿಸಿದನು" ಈ ಮಾತುಗಳನ್ನು ಕೇಳಿ ದೇವೇಂದ್ರನೂ ಕೂಡ ಭಕ್ತಿ ಪೂರ್ವಕವಾಗಿ ಪ್ರದಕ್ಷಿಣೆ ಮಾಡಿ ತ್ರೈಲೋಕ್ಯಾದಿಪತ್ಯವನ್ನು ಪಡೆ ದನು

## ಸೇವಾ ಮಹಿಮೆ

ಇಂತಹ ಶ್ರೀನಿವಾಸನ ವಿಶೇಷ ಸೇವೆಯ ಫಲವು ಆಶ್ಚರ್ಯಕರವಾಗಿರುವುದು ಇದನ್ನು ಯಮನು ಭಗೀರದನನ್ನು ಕುರಿತು 'ಎಲೈ ಭಗೀರ ದನೇ ವ್ಯಾಘ್ರಾಚಲನಿವಾಸಿಯಾದ ವೆಂಕಟೇಶನ ಕೈಂಕರ್ಯ ಮಹಾತ್ಮ್ಯವು ಅನಿರ್ವಚನೀಯವಾ ದುದು ಅದನ್ನು ವಿಸ್ತಾರವಾಗಿ ಹೇಳುವುದಕ್ಕೆ ಆದಿಶೇಷನಿಂದಲೂ ಸಾದ್ಯವಿಲ್ಲ ಸಂಕ್ಷೇಪವಾಗಿ ವಿವರಿಸುವೆನು ಕೇಳು ದ್ವಾದಶಿ ಪೂರ್ಣಿಮೆ ಮತ್ತು ಶ್ರವಣ ನಕ್ಷತ್ರದಲ್ಲಿ ಯಾರು ಶ್ರೀನಿವಾಸನಿಗೆ ಕ್ಷೀರಾಭಿಷೇಕವನ್ನು ಮಾಡಿಸುತ್ತಾರೋ ಅವರು ಗೋಲೋಕವನ್ನು ಪಡೆಯುತ್ತಾರೆ ಕನ್ಯಾಮಾ ಸದ ಶುಕ್ಲಪಕ್ಷದ ಶ್ರವಣ ನಕ್ಷತ್ರದಲ್ಲಿ ಪಂಚಾ ಮೃತ ಮತ್ತು ಫಲಗಳಿಂದ ಅಭಿಷೇಕ ಮಾಡಿಸು ವವರು ಸಕಲ ಪಾಪ ಕರ್ಮಗಳಿಂದರೂ ಮುಕ್ತ ರಾಗಿ ಮೋಕ್ಷವನ್ನು ಪಡೆಯುವರು

ಎಂತಹ ಮನುಷ್ಯನೇ ಆಗಲಿ ಶ್ರೀನಿವಾಸನ ಕೈಂಕರ್ಯದಲ್ಲಿ ನಿರತನಾದರೆ ಅಷ್ಟು ಮಾತ್ರಕ್ಕೆ ಅಂತಹವನು ವೈಕುಂಠದಲ್ಲಿ ನೆಲೆಸುವನು

ಕೃತೆ ಯುಗದಲ್ಲಿ ಕಾಂಚೀ ಕ್ಷೇತ್ರದ ವರದರಾ ಜನು ಪ್ರದಾನನು, ತ್ರೇತಾಯುಗದಲ್ಲಿ ಶ್ರೀರಂಗ ಕ್ಷೇತ್ರದ ಶ್ರೀ ರಂಗನಾದನು ಪ್ರದಾನದೇವತೆಯು, ದ್ವಾಪರಯುಗದಲ್ಲಿ ಯಾದವಾದ್ರಿ ಕ್ಷೇತ್ರದ ತಿರು ನಾರಾಯಣನು ಪ್ರಸಿದ್ಧನು ಕಲಿಯುಗದಲ್ಲಿ ಶೇಷಾದ್ರಿ ಕ್ಷೇತ್ರದ ವೆಂಕಟೇಶನು ಪ್ರದಾನ ದೇವ ನಾಗಿರುವನು

ಯಾರು ಈ ಶ್ರೀನಿವಾಸನ ಪಾದ ಕಮಲ ಸೇವಾ ವೈಬವವನ್ನು ಹೇಳುವನೋ ಅದವಾ ಕೇಳುವನೋ ಅವನು ಸಕಲ ಕರ್ಮ ಬಂದನ ಗಳಿಂದಲೂ ವಿಮುಕ್ತವಾಗಿ ಶ್ರೀ ಶ್ರೀನಿವಾಸನಿಗೆ ಶ್ರೀನಿವಾಸನು ಆತನನ್ನು ಕುರಿತು 'ಎಲೈ ಆದಿ ಶೇಷನೆ, ವಾಯುವಿಗೆ ಸೋತುಹೋದೆನೆಂದು ವ್ಯಸನಪಡಬೇಡ, ವಾಯುವನ್ನೇ ಬಕ್ಷಿಸಿಬಿಡುವ ನೀನು ಅವನಿಗಿಂತಲೂ ಬಲಶಾಲಿ ಎಂಬುದರಲ್ಲಿ ಸಂದೇಹವೇನು? ನೀನು ನನಗೆ ಸರ್ವದಾ ಹಾಸಿಗೆ ಯಾಗಿಲ್ಲವೆ ಆಸನವಾಗಿಲ್ಲವೆ? ಮೇರು ಪರ್ವತ ಶಿಖರದ ಹೋಳನ್ನು ನೀನು ಸುತ್ತಿಕೊಂಡು ಇದ್ದು ದರಿಂದ, ಇದು ಶೇಷಾದ್ರಿ ಎಂತಲೇ ಇನ್ನು ಮೇಲೆ ಲೋಕದಲ್ಲಿ ಪ್ರಖ್ಯಾತಿಯನ್ನು ಹೊಂದಲಿ ನಾನೂ ಶ್ರೀ ಭೂದೇವಿ, ನೀಳಾ ಸಮೇತನಾಗಿ ಈ ಪರ್ವತದಲ್ಲಿಯೇ ವಾಸ ಮಾಡುತ್ತಲಿರುವೆನು ನೀನೂ ಇಲ್ಲಿ ಪರ್ವತ ರೂಪಿನಿಂದ ಇರು' ಎಂದು ಹೇಳಿ ಅಂತರ್ದಾನವನ್ನು ಹೊಂದಿದನು ಅಂದಿ ನಿಂದ ಶೇಷಾದ್ರಿ ಎಂದು ಪ್ರಖ್ಯಾತವಾಗಿರುವುದು

## ಕನಕಾಚಲ

ಈ ಪರ್ವತವು ಕಾಂತಿಯಲ್ಲಿ ಸಕಲ ಪರ್ವ ತಗಳನ್ನೂ ಮೀರಿ ಬಂಗಾರದಂತೆ ತಾನೇತಾ ನಾಗಿ ಪ್ರಕಾಶಿಸುತ್ತಲಿರುವುದರಿಂದಲೂ, ಕನಕಾ

ಚಲವೆಂದು ಖ್ಯಾತಿಗೊಂಡಿರುವುದು ತನ್ನಲ್ಲಿರುವ ಶ್ರೀನಿವಾಸನನ್ನು ಆಶ್ರಯಿಸಿದ ಭಕ್ತರಿಗೆ 'ಕನಕವೃಷ್ಟಿ' ಕರೆಯುತ್ತಲಿರುವುದರಿಂದಲೂ, ಕನಕಾದ್ರಿರೂಪದ ಮೇರು ಪರ್ವತದ ಶಿಖರವಾಗಿರುವುದರಿಂದಲೂ 'ಕನಕಾಚಲ'ವೆಂದು ಖ್ಯಾತಿಗೊಂಡಿರುವುದು

## ವೆಂಕಟಾದ್ರಿ

'ವೇಂ' ಎಂದರೆ ಸಕಲ ಪಾಪಗಳೆಂದು ಅರ್ಥ "ಕಟ" ಎಂದರೆ ಅವುಗಳನ್ನೆಲ್ಲಾ ದಹಿಸುವುದೆಂದು ಅರ್ಥ ತನ್ನನ್ನು ಆಶ್ರಯಿಸಿದ ಭಕ್ತರ ಸಕಲ ಪಾಪಗಳನ್ನು ನಾಶ ಮಾಡುವುದರಿಂದ "ವೆಂಕಟಸ್ವಾಮಿ" ಎಂದು ಖ್ಯಾತಿ ಪಡೆದ ಶ್ರೀನಿವಾಸನಿಗೆ ನಿವಾಸಸ್ಥಾನವಾದ ಅದ್ರಿಯಾಗಿರುವುದರಿಂದ, 'ವೆಂಕಟಾದ್ರಿ' ಎಂದು ಖ್ಯಾತಿಗೊಂಡಿರುವುದು

## ವ್ಯಾಘ್ರಾಚಲ

ಹೀಗಿರಲು ಒಮ್ಮೆ ಶ್ರೀನಿವಾಸನು ಶರತ್ಕಾಲದ ಬೆಳುದಿಂಗಳಿನಿಂದ ಕೂಡಿದ ರಾತ್ರಿಯಲ್ಲಿ ಬೇಟೆಯಾಡಲು ಅಶ್ವಾರೂಢನಾಗಿ ಹೊರಟನು ಹಿಂದೆ ಅಗಸ್ತ್ಯ ಮಹರ್ಷಿಗಳಿಂದ ಶಪಿಸಲ್ಪಟ್ಟ ವ್ಯಾಘ್ರಾಸುರನು ಹುಲಿಯಾಗಿ ಎಲ್ಲೆಲ್ಲೂ ಸಂಚಾರ ಮಾಡುತ್ತಾ ಆಕಸ್ಮಾತ್ತಾ ವೆಂಕಟಾದ್ರಿಯ ವೈಕುಂಠ ತೀರ್ಥದ ಬಳಿ ಮೃತ್ಯುವಿನಂತೆ ಕುಳಿತಿತ್ತು, ಅದೇ ಸಮಯಕ್ಕೆ ಮಾಂಡವ್ಯ ಋಷಿಗಳು ಕುಂಭವನ್ನು ತೆಗೆದುಕೊಂಡು ಆ ತೀರ್ಥದ ಬಳಿ ಬಂದರು ಅವರನ್ನು ನೋಡಿ, ಆ ವ್ಯಾಘ್ರವು ತಿನ್ನುವ ಆಸೆಯಿಂದ ಮುಂದೆ ಬಂತು ಋಷಿಗಳು ಭಯದಿಂದ ಶ್ರೀನಿವಾಸನನ್ನು ಧ್ಯಾನಿಸುತ್ತಾ, ಅಷ್ಟಾಕ್ಷರಿಯನ್ನು ಜಪಿಸತೊಡಗಿದನು ಬೇಟೆಯಲ್ಲಿದ್ದ ಶ್ರೀನಿವಾಸನು ಪ್ರತ್ಯಕ್ಷನಾಗಿ ಯುದ್ಧಕ್ಕೆ ನಿಲ್ಲಲು ವ್ಯಾಘ್ರಾಸುರನು ಶ್ರೀನಿವಾಸನ ಮೇಲೆ ಎರಗಿ ಕುದುರೆಯನ್ನು ಕಚ್ಚಿ ತಿನ್ನಲು ಶುರು ಮಾಡಿದನು ತನ್ನ ಕುದುರೆಗಾಗುತ್ತಿರುವ ಕಷ್ಟವನ್ನು ನೋಡಿ ಆಸುರನ ಕತ್ತನ್ನು ಕತ್ತರಿಸಲು ಭಯಂಕರವಾಗಿ ಕಿರುಚುತ್ತಾ ಪ್ರಾಣಬಿಡುವ ವೇಳೆ ಬೇರೆ ಶರೀರವನ್ನು ಹೊಂದಿ ತನ್ನ ಶಾಪವು ಜ್ಞಾಪಕಕ್ಕೆ ಬಂದು ಶ್ರೀನಿವಾಸನನ್ನು ಮಹತ್ತರವಾಗಿ ಸ್ತೋತ್ರ ಮಾಡಿದನು ಶ್ರೀನಿವಾಸನು ಸಂತುಷ್ಟನಾಗಿ, ಅವನಿಗೆ ಉತ್ತಮ ಗತಿಯನ್ನಿತ್ತು ಅಂದಿನಿಂದ ವೆಂಕಟಾದ್ರಿಗೆ ವ್ಯಾಘ್ರಾಚಲವೆಂದು ಹೆಸರನ್ನಿತ್ತು ವೈಕುಂಠ ತೀರ್ಥಕ್ಕೆ ವ್ಯಾಘ್ರತೀರ್ಥವೆಂದು ಹೆಸರಾಗಲೆಂದು ಅನುಗ್ರಹಿಸಿದನು

## ಕೈಂಕರ್ಯ ಮಹಿಮೆ

ಹಿಂದೆ ಜಗದ್ಭಜನೆಂಬ ರಾಜನು ಸೇವಕಜನರನೇಕರು ಇದ್ದರೂ ಈ ದೇವಸ್ಥಾನವನ್ನು ತನ್ನ ಕೈಯಿಂದ ಗುಡಿಸಿ, ದೀಪ ಹಚ್ಚುತ್ತಿದ್ದನು ಇವನ ಕೃತ್ಯಕ್ಕೆ ಆಶ್ಚರ್ಯಗೊಂಡವನಾದ ವೀತಿಹೋತ್ರನೆಂಬ ಬ್ರಾಹ್ಮಣನು ಕೇಳಿದ್ದಕ್ಕೆ ರಾಜನು ಈ ರೀತಿ ಹೇಳಿದನು "ಎಲೈ ವೀತಿಹೋತ್ರನೆ, ಈ ದಕ್ಷಿಣ ಶೇಷಾದ್ರಿ ನಿಲಯನಾದ ಶ್ರೀನಿವಾಸನ ಕೈಂಕರ್ಯ ವೈಭವವು ಅದ್ಭುತವಾದುದು ಅವನ ಅನುಗ್ರಹದಿಂದ ನನಗೆ ಜನ್ಮಾಂತರ ವಿಚಾರಗಳು ಜ್ಞಾಪಕಕ್ಕೆ ಬಂದಿದೆ ನಾನು ಕೃತಯುಗದಲ್ಲಿ ರೈವತನೆಂಬ ಬ್ರಾಹ್ಮಣನಾಗಿ ಹುಟ್ಟಿ ವೇದ ವೇದಾಂಗಗಳಲ್ಲಿ ಪಾಂಡಿತ್ಯ ಹೊಂದಿದ್ದರೂ ಹಣದ ಆಸೆಗಾಗಿ ಮಾಡಬಾರದ ನಿಷಿದ್ಧ ಕೃತ್ಯಗಳನ್ನು ಮಾಡಿ ಬಂಧುಗಳಿಂದ ಬಿಡಲ್ಪಟ್ಟವನಾಗಿ ಮುಪ್ಪಿನಿಂದ ರೋಗಗ್ರಸ್ತನಾಗಿ ದುಃಖದಿಂದ ಕಷ್ಟಪಡುತ್ತಿದ್ದರೂ ಹಣದ ಆಸೆಗಾಗಿ ಎಲ್ಲೆಲ್ಲೂ ಅಲೆಯುತ್ತಾ ನರ್ಮದಾ ನದಿ ತೀರದಲ್ಲಿ ಸತ್ತು ಹೋದೆನು ಮತ್ತೆ ಮರು ಜನ್ಮದಲ್ಲಿ ಅನ್ಯ ಜಾತಿಯಲ್ಲಿ ದಂಡಕೇತುವೆಂಬ ಹೆಸರಿನಿಂದ ಹುಟ್ಟಿದೆನು ಆಗಲು ನಾನು ಪರಮ ನೀಚ ಕೆಲಸವನ್ನು ಮಾಡುತ್ತಲಿದ್ದನು ಹೀಗಿರುವಾಗ ಒಂದಾ ಪರಮ ಭಕ್ತನಾಗಿ ಐಹಿಕಾಮುಷ್ಮಿಕ ಸೌಖ್ಯ ಸಂಪತ್ತುಗಳನ್ನು ಪರಿಪೂರ್ಣವಾಗಿ ಅನುಭವಿಸುವನು

ಪುಷ್ಯ ಶುಕ್ಲ ದಶಮಿಯಂದು ರಥೋತ್ಸವವು ಜರುಗುವುದು

(ಕೃಪೆ - ಪುಲಗಿನಮರಡಿ ಮಹಾತ್ಮ

-- ಶ್ರೀ ಅಪ್ರಮೇಯ ಅಯ್ಯಂಗಾರ್)

***

## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ ತಿ ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿದೆ

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು ಇದಕ್ಕಾಗಿ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ ಪಂಚಲೋಹ ವಿಗ್ರಹಗಳನ್ನೂ ೫೦ ಶತಾಂಶ ರಿಯಾಯಿತಿಯಲ್ಲಿ ಒದಗಿಸಲಾಗುವುದು ಇದಕಾಗಿಯೂ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅರ್ಜಿದಾರರಿಗಳಿಗೇ ಸೇರಿದ್ದು

ಕಾಲದಿಂದ ಕಾಲಕ್ಕೆ ತಿ ತಿ ದೇ ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ-

**ಕಾರ್ಯನಿರ್ವಹಣಾಧಿಕಾರಿ, ತಿ ತಿ ದೇ ತಿರುಪತಿ ೫೧೭೫೦೧**

# ದ್ರಾಮಿಡೋಪನಿಷತ್ ಸಂಗ್ರಹ

(ಹಿಂದಿನ ಸಂಚಿಕೆಯಿಂದ)

(ತಿರುವಾಯ್‌ಮೊಳಿಸಾರ)

**ಕಂದಾಡೈಕೇಶವನ್**

ಕೈಯಾರ್

ಆದ್ಯೇ ಮುನಿಸ್ಸ ಶತಕಸ್ಯ ಪಂಚಮಸ್ಯ ಶ್ರೇಯ
ಸ್ವಕೀಯ ಹಿತ ದೋದನ ಮಿಾಕ್ಷಮಾಣ
ಏತದ್ವಿರೋದಿ ಬಹುಳಸ್ಯ ಮಮಾತ್ರ ಹೇತು
ಶೌರೇ ಕೃಪೈವ ಮಹತೀತಿ ಶಶಂಸ ಭೂಯ ||

ನಮ್ಮಾಳ್ವಾರರು ತಮಗೆ ಸರ್ವೇಶ್ವರನ ವಿಷಯವಾಗಿ ಹುಟ್ಟಿದ ಅಬಿಮುಖ್ಯಾದಿ ಗುಣಗಳನ್ನು ನೋಡಿ, ಇದಕ್ಕೆ ಕಾರಣವೇನೆಂದು ಆಲೋಚಿಸಿ ಬೇರೆಯಾವ ವಿದವಾದ ಕಾರಣವೂ ಇಲ್ಲದ್ದರಿಂದ ಇದಕ್ಕೆ ಶ್ರಿಯ ಪತಿಯ ನಿರ್ಹೇತುಕ ಕೃಪೆಯೇ ಕಾರಣವೆಂದು ನಿಶ್ಚಯಿಸಿ ಆ ಅರ್ದವನ್ನು ಈ ತಿರುವಾಯ್ ಮೊಳಿಯಲ್ಲಿ ಹೇಳಿದರು

ಪೂಲಿಕ

ಆತ್ಮೋಪದೇಶ ವಿಭವೈ ಶಮಿತಾವ ಬೃಂದಂ
ಆರಬ್ಧ ವೈಷ್ಣವ ಸಮೃದ್ಧಿ ಸಮಿದ್ಯ ಮಾನಂ
ಆಲೋಕಯನ್ ಕ್ಷಿತಿತಲಂ ಕಲಿನಾಪಿ ಅದೃಷ್ಟಂ
ಆಶಾಸ್ತ ಮಂಗಳ ಮಮುಷ್ಯ ಮುನಿರ್ದ್ವಿತೀಯೇ ||

ಜನರಿಗೆ ತಾವು ಉಪದೇಶಿಸಿದ ಪರಮಾತ್ಮೋಪದೇಶದಿಂದ ಸಕಲ ಪಾಪಗಳೂ ಹೋಗಿ ದುಷ್ಕರ್ಮವು ಯಾವುದೂ ಇಲ್ಲದೆ ಶ್ರೀ ವೈಷ್ಣವರಿಂದ ತುಂಬಿರುವ ಬೂಲೋಕವನ್ನು ನೋಡಿ ನಮ್ಮಾಳ್ವಾರರು ಈ ತಿರುವಾಯ್‌ಮೊಳಿಯಲ್ಲಿ ಶ್ರೀ ವೈಷ್ಣವ ಸಮೃದ್ಧಿಗೆ ಮಂಗಳಾಶಾಸನವನ್ನು ಮಾಡಿದರು

ಮಾಶರು

ಪೂರ್ವಾನು ಸಂಹಿತ -- ಮನೋಹರ ಶೌರಿ ಮೂರ್ತೀ
ಸಂಶ್ಲೇಷ ಲೋಲ ಹೃದಯಸ್ತದಲಾಬಖಿನ್ನ
ಲಾದೇ ಸ್ವಯತ್ನಮಪಿ ಕರ್ತುಮಿಯೇಷ ದು ಖಾತ್
ಭಾರ್ಯಾದಶಾಂ ಚ ಪರಿಗೃಹ್ಯ ಮುನಿಸ್ತೃತೀಯೇ ||

ನಮ್ಮಾಳ್ವಾರರು ಮೊದಲು ತಾವು ಮಾನಸಿಕವಾಗಿ ಅನುಬವಿಸಿದ ಸರ್ವೇಶ್ವರನನ್ನು ಪ್ರತ್ಯಕ್ಷವಾಗಿ ಕೂಡಲು ಆಸಪಟ್ಟು ಅದು ಲಬಿಸದೇ ದು ಖಿತರಾಗಿ ಒಬ್ಬಪಿರಾಟ್ಟಿಯ (ನಾಯಿಕೆಯ) ಅವಸ್ಥೆಯನ್ನು ಹೊಂದಿ ಆ ಪರಮಪುರುಷನನ್ನು ಕೂಡಲು,ಮಡಲೂರುಕ್ಕೆ ಎಂಬುವ ಸ್ವಪ್ರಯತ್ನವನ್ನು ಮಾಡಲು ಇಚ್ಛಿಸುತ್ತಾರ

ಊರಲ್ಲಾಂ

ತಾಂ ಚ ತ್ವರಾಂ ಎದವತೀ ಸಕಲೇಂದ್ರಿಯಾಣಾಂ
ಆಚ್ಛಾದಿಕಾ ಸವಿದಗಾಂ ಶ್ಚ ವಿನಷ್ಟಯಂತೀ
ವೇಲಾತಿಗಾ ವಿರಹಿಣೀ ತ್ವಜುಷೋ ಮುನೇಸ್ತು
ಮೋಹಾಹ್ವಯಾ ರಜನಿರಭ್ಯುದಿತಾ ಚತುರ್ದೇ ||

ಬಗವದ್ವಿಶ್ಲೇಷವನ್ನು ಸಹಿಸದೇ ಇರುವ ನಮ್ಮಾಳ್ವಾರರಿಗೆ ಒಂದಾ ಸಮಯದಲ್ಲೂ ಕೂಡ ಬಗವಂತನು ಬಾರದೇ ಇದ್ದದ್ದರಿಂದ ವಿರಹಖೇದವು ಅದಿಕವಾಗಿ ಒಬ್ಬ ಪಿರಾಟ್ಟಿಯ ಅವಸ್ಥೆಯನ್ನು ಹೊಂದಿದರು ಆಗ ಅವರಿಗೆ ಸಮಿಾಪದಲ್ಲಿರುವ ಪದಾರ್ದಗಳೂ ಕೂಡ ಕಾಣಸದೆ ಇರುವಂತೆ ಸಕಲೇಂದ್ರಿಗಳೂ ನಿಷ್ಕ್ರಿಯೆಗೊಂಡು ಮೂರ್ಛೆ ಉಂಟಾಗಿ ಅತ್ಯದಿಕವಾದ ಮೋಹವುಂಟಾಯಿತೆಂದು ಈ ನಾಲ್ಕನೆಯ ತಿರುವಾಯ್ ಮೊಳಿಯಲ್ಲಿ ಹೇಳಿದ್ದಾರೆ

ಏಂಗನೆಯೋ

ಶಾದ್ಯಕ್ಷಮೋಹ ಗಳನೇ ಸತಿ ಭಾವನಾಯಾ
ಬೂಮ್ನಾ ಹರೇರವಯವಾಚರಣಾದಿ ದೃಷ್ಟ್ವಾ
ಪ್ರತ್ಯಕ್ಷತ ತದನುಭೂತ್ಯ ನವಾಪ್ತಿತಶ್ಚ
ಪ್ರೀತ್ಯಾ ಶುಚಾ ಮುನಿರಯುಜ್ಯತ ಪಂಚಮೇ ಸ

ಆ ಮುನಿಯು ತಮ್ಮ ಮೋಹ ದೆಶೆಯು ಹೋಗುತ್ತಿರಲು ಅನವರತ ಮನನದ ಅತಿಶಯದಿಂದ ಸರ್ವೇಶ್ವರನ ದಿವ್ಯ ಅವಯವ ಆಬರಣಾದಿಗಳನ್ನು ಮಾನಸಿಕವಾಗಿ ಕಂಡು ಪ್ರತ್ಯಕ್ಷವಾಗಿ ಆ ಸರ್ವೇಶ್ವರನನ್ನು ಅನುಬವಿಸದೇ ಹೋದದ್ದರಿಂದ ಸಂಭವಿಸಿದ ಪ್ರೀತಿಯಿಂದಲೂ ದು ಖದಿಂದಲೂ ಪ್ರಾರ್ದಿಸುತ್ತಾರೆ

ಕಡಲ್

ಶೋಕಂ ಚ ತಂ ಪರಿಜಿಹೀರ್ಷುರಿವಾಖಿಲಾನಾಂ
ಸರ್ಗಾದಿಕರ್ತುರನುಕಾರರಸೇನ ಶೌರೇ
ತಸ್ಯ ಪ್ರವೃತ್ತಿ ಅಖಿಲಾಚರಿತಾಮಯುಂತಿ
ತದ್ಭಾವ ಭಾವಿತಮನಾ ಮುನಿರಾಹ ಷಷ್ಠೇ ||

ಆಳ್ವಾರರು ತಮಗೆ ಭಗವದ್ವಿಶ್ಲೇಷದಿಂದ ಹಿಂದೆ ಸಂಬವಿಸಿದ ದು ಖವನ್ನು ಹೋಗಲಾಡಿಸಿಕೊಳ್ಳಲು ಗೋಪಿಕೆಯರು ಶ್ರೀಕೃಷ್ಣನ ಚೇಷ್ಟೆಗಳನ್ನು ಅನುಕರಿಸಿದಂತೆ ತಾವೂ ಉಭಯ ವಿಬೂತಿಯುಕ್ತನಾದ

ಸರ್ವೇ ಶ್ವರನ ದಿವ್ಯ ಚೇಷ್ಟಿತಗಳನ್ನು ಅನುಕರಿಸಿ ಸರ್ವೇಶ್ವರನು ಹೇಳುವ ಮಾತುಗಳನ್ನು ತಾವೂ ಹೇಳಿದರು

ಸೂ ತ್ರ

ಏವಂಚ ಸೂ ನವಿಗತಾಬಿಮತ ತದಾಪ್ತೌ
ನಾರಾಯಣಾದಿತರಸಾದನ ಶೂನ್ಯತಾಂ ಸ್ವಾಂ
ತಸ್ಮೈ ನಿವೇದ್ಯ ತಮುಪಾಯದಿಯಾ ಏವ
ಕಿಂಚಿತ್ ಆಶ್ವಸ್ತವಾನ್ ಅದ ಮುನಿ ಕಿಲ ಸಪ್ತಮೇನ ||

ಹೀಗ ಸರ್ವೇಶ್ವರನನ್ನು ಅನುಕರಿಸಿದರೂ ಕೂಡ ಆತನು ಒಂದು ಸೇವೆಯನ್ನು ಸಾದಿಸದೇ ಹೋ ದದ್ದರಿಂದ ನಮ್ಮಾಳ್ವಾರರ ಮನೋರಥವು ನೆರವೇರದೇ ಹೋಯಿತು ಆಗ ಅವರು ಸರ್ವೇಶ್ವರನನ್ನು ಕುರಿತು ನಿನ್ನ ಶ್ರೀಪಾದಗಳನ್ನು ಹೊಂದಲು ನನಗ ಕರ್ಮ ಜ್ಞಾನಾದಿ ಸಾದನಗಳು ಯಾವುವೂ ಇಲ್ಲ ನೀನೇ ಉಪಾಯವಾದುದ್ದರಿಂದ ಅನನ್ಯಗತಿಕನಾದ ನನ್ನನ್ನು ಸ್ವೀಕರಿಸಲೇ ಬೇಕೆಂಬುವುದಾಗಿ ಬಿನ್ನೈಸಿ ಸ್ವಲ್ಪ ಮನಸ್ಸನ್ನು ಸಮಾದಾನ ಮಾಡಿಕೊಂಡರು

ಆರವಮುತೇ

ಆಶ್ವಾಸಲಬ್ದ ದೃತಿನಾ ಮನಸಾ ಸಮೇತ್ಯ
ಶ್ರೀ ಕುಂಬಘೋಣಶಯ ಮಪ್ರತಿಮಾಭಿರೂಪ್ಯಂ
ಆಲೋಕ್ಯ ಸಾಂತ್ವನವಚ ಪರಿರಂಬಣಾದೀನ್
ಅಪ್ರಾಪ್ತವಾನ್ ಮುನಿರಬಿದ್ಯತ ಸೋಷ್ಟ ಮೇನ ||

ತರುವಾಯ ನಮ್ಮಾಳ್ವಾರರು ಎಂಟನೆಯ ದಶಕದಲ್ಲಿ ಆಶ್ವಾಸದಿಂದ ಹೊಂದಲ್ಪಟ್ಟ ಧೈರ್ಯವುಳ್ಳ ಮನಸ್ಸಿನಿಂದ ತಿರುಕ್ಕುಡಂದೈ ಎಂಬ ದಿವ್ಯ ದೇಶದಲ್ಲಿ ಶಯನ ಮಾಡಿರುವ (ಕುಂಬಘೋಣಂ) ಅಸದೃಶವಾದ ಸೌಂದರ್ಯವುಳ್ಳ ಶ್ರಿಯ ಪತಿಯನ್ನು ಸಮೀಪಿಸಿ ದರ್ಶನ ಮಾಡಿ ಕುಶಲ ಪ್ರಶ್ನೆ ಆಲಿಂಗನಾದಿಗಳನ್ನು ಹೊಂದದವರಾಗಿ ದು ಖಪಟ್ಟರು

ಮಾನೇಯ್‌ನೋಕ್ಕು

ಅನ್ಯಂ ಮುನಿ ಪ್ರತಿಹತಸ್ತತ ಏವ ಖೇದಾತ್
ಗಂತುಂ ಪ್ರವೃತ್ತ ಮನಸಾ ಪಿತು ದಿವ್ಯದೇಶಂ
ತದ್ಭೋಗ್ಯ ತಾಮಬಿದದತ್ತದದೀಶ ಪಾದೌ
ಯಾಯಾಂ ಕದೇ ತ್ಯಕದಯನ್ನವಮೇ ಸದೈನ್ಯಂ

ನಮ್ಮಾಳ್ವಾರರು ಶ್ರೀ ಕುಂಬಘೋಣ ದಿವ್ಯ ದೇಶದಲ್ಲಿ ತಮ್ಮ ಅಬಿಲಾಷೆ ನೆರವೇರದೆ ಹೋಗಲು ಖಿನ್ನರಾಗಿ ಬೇರೊಂದು ದಿವ್ಯದೇಶಕ್ಕೆ ಹೋಗಲು ಉದ್ದೇಶಿಸಿ ಹೋಗಲು ಶಕ್ತಿಯಿಲ್ಲದವರಾಗಿ ಅದರ ಸಮೀಪದಲ್ಲಿರುವ ಒಂದು ಉದ್ಯಾನವನ್ನು ಸೇರಿ ಆ ಕಡೆಯಿಂದ ಬರುತ್ತಿರುವ ಮಂದಮಾರುತದಿಂದ ಬಾದಿಸಲ್ಪಟ್ಟವರಾಗಿ ಆ ದಿವ್ಯ ದೇಶ ವನ್ನು

ಯಾವಾಗ ಸೇರುವೆನೋ ಎಂದು ಒಂಬತ್ತನೆಯ ತಿರುವಾಯ್ ಮೊಳಿಯಲ್ಲಿ ಪ್ರಾರ್ಥಿಸುತ್ತಾರೆ

ಪಿರಂದವಾರುಂ

ಅರ್ಚಾಂ ಚ ಮೌನ ನಿಯತಾ ಮಪಹಾಯ ಶೌರೇ
ಆಲಾಪಯೋಗ್ಯ ವಿಭವೇ ಪುನರಾಗತೋಽಸೌ
ಚಿತ್ತಸ್ಯ ತದ್ಗುಣ ಗಣ ಸ್ಮರಣೇ ನಿಜಸ್ಯ
ಶೈಥಿಲ್ಯ ಶಮನಂ ತಮಯಾಚತಾಸ್ಮೋ ||

ಮೌನವ್ರತದಲ್ಲಿ ನಿಯಮದಿಂದಿರುವ ಸ್ವಾಮಿಯ ಅರ್ಚಾವತಾರವನ್ನು ಬಿಟ್ಟು ಮಾತನಾಡಲು ಯೋಗ್ಯವಾದ ವಿಭವಾವತಾರದಲ್ಲಿ ಸರ್ವೇಶ್ವರನನ್ನು ಅನುಭವಿಸಲು ಆಸೆಪಟ್ಟು ನಮ್ಮಾಳ್ವಾರರು ಆತನ ಗುಣಗಳನ್ನು ಅನುಸಂದಾನಮಾಡಲು ಆರಂಬಿಸುವಾಗಲೇ, ಅವರಲ್ಲಿ ತಾವು ಮಗ್ನರಾಗಿ ಶಿಧಿಲಾಂತ ಕರಣರಾಗಿ ನಿನ್ನ ಗುಣಾನುಬವಕ್ಕೆ ವಿರೋದಿಯಾದ ನನ್ನ ಮನಶ್ಶೈದಿಲ್ಯವನ್ನು ಹೋಗಲಾಡಿಸಬೇಕೆಂಬುದಾಗಿ ಈ ಐದನೆಯ ಶತಕದ ಕೊನೆಯಲ್ಲಿ ಯಾಚಿಸಿದ್ದಾರೆ

ವೈಕಲ್

ಆದ್ಯೇತು ಷಷ್ಠ ಶತಕಸ್ಯ ಮುನಿಸ್ತದಾರ್ತೋ
ನಾರೀ ಸಮಾದಿ ಮದಿಗಮ್ಯ ನಿಜಾಮವ ಸ್ಥಾಮ್
ಅರ್ಚಾ ಹರಿಂ ಕಮಪಿ ಪಕ್ಷಿಬಿರನ್ತಿಕಸ್ಥೈ
ಆಪನ್ನ ರಕ್ಷಣ ಸದೀಕ್ಷಮಬೋದಯತ್ಸಃ ||

ಆರನೆಯ ಶತಕದ ಮೊದಲನೆಯ ದಶಕದಲ್ಲಿ ಬಗವದ್ವಿರಹದಿಂದ ಖಿನ್ನರಾದ ಆ ನಮ್ಮಾಳ್ವಾರರು ಹೆಣ್ಣಿನ ಅವಸ್ಥೆಯನ್ನು ಹೊಂದಿ ತಮ್ಮ ಅವಸ್ಥೆಯನ್ನು ಸಮಿಪದಲ್ಲಿರುವ ಪಕ್ಷಿಗಳಿಂದ ಆಪತ್ಬಾಂದವನಾದ ಶ್ರಿಯ ಪತಿಯನ್ನು ಕುರಿತು ತನ್ನ ಅವಸ್ಥೆಯನ್ನು ಹೇಳಿರೆಂದು ಬೇಡಿಕೊಂಡರು

ಮಿನ್ನಿಡೈ

ತಾವದ್ವಿಲಂಬ ಮಸರ್ಹ ಪ್ರಣಯೇನ ರೋಷಾತ್
ಕೃಷ್ಣಂ ಸಮಾಗತ ಮಪಿ ತ್ವರಯಾ ವಿನಿಂದ್ಯ
ತೇನ ಸ್ವಸಂಗಮ ಮನೋರದಿನಾ ದ್ವಿತೀಯೇ
ಸಾಂತ್ವೋಕ್ತಿಬಿ ಸಮನುನೀಯ ಸಮಾಹಿತೋಽಭೂತ್ ||

ಈ ಆರನೆಯ ಶತಕದ ದ್ವಿತೀಯ ದಶಕದಲ್ಲಿ ಸರ್ವೇಶ್ವರನು ಇವರೊಡನೆ ಸಂಶ್ಲೇಷಿಸಲು ವಿಳಂಬಮಾಡದೆ ಕ್ಷಿಪ್ರವಾಗಿ ಬಂದರೂ ಆ ಕೃಷ್ಣನನ್ನು ಪ್ರಣಯಕೋಪದಿಂದ ನಿಂದಿಸಲು, ತನ್ನೊಡನೆ ಕೂಡಲು ಬಂದ ಶ್ರೀಕೃಷ್ಣನ ಒಳ್ಳೆಯ ಮಾತುಗಳಿಂದ ಸಂತೋಷಿತರಾಗಿ ಪ್ರಣಯ ರೋಷವನ್ನು ತೊರೆದರು

ನಲ್‌ಕುರವುಂ

ಕೋಪಂ ಮಮ ಪ್ರಣಯಜಂ ಪ್ರಶಮಯ್ಯ ಕೃಷ್ಣ
ಸ್ವಾದೀನತಾಂ ಅತನು ತೇತಿ ಸವಿಸ್ಮಯ ಸ್ಸಃ
ಸ್ವೀಯಾಂ ವಿರುದ್ಧ ಜಗದಾಕೃತಿತಾಂ ಚ ತೇನ
ಸಂದರ್ಶಿತಾ ಮನುಬಭೂವ ಮುನಿಸ್ತೃತೀಯೇ ||

ಶ್ರೀಕೃಷ್ಣನು ಪ್ರೀತಿಯಿಂದ ಹುಟ್ಟಿದ ನನ್ನ ಕೋಪವನ್ನು ಶಮನ ಮಾಡಿ ನನ್ನನ್ನು ತನಗೆ ಅದೀನನಾಗಿರುವಂತ ಮಾಡಿದನು ಎಂಬುವುದಾಗಿ ಆಶ್ಚರ್ಯದಿಂದ ಕೂಡಿದ ಆ ನಮ್ಮಾಳ್ವಾರರು ಆ ಸರ್ವೇಶ್ವರನಿಂದ ಸಂಶ್ಲೇಷಿಸಿದಾಗ ಆತನ ಜಾಣತನವನ್ನು ನೋಡಿ ಪರಸ್ಪರ ವಿರೂದವಾದ ಜಗತ್ತನ್ನು ಶರೀರವಾಗುಳ್ಳ ಸ್ಥಿತಿಯನ್ನು ಮೂರನಯ ದಶಕದಲ್ಲಿ ಅನುಬವಿಸಿದರು

ಕುರವೈ

ಆನಂದ ಶೀತಳಿತವಾಗನು ಸಂವದೀಯ
ಕೃಷ್ಣಸ್ಯ ವೀರ್ಯ ಚರಿತಾನ್ಯಹ ಮಾದರೇಣ
ಇತ್ಥಂ ಪುರಾ ಸ್ವಯ ಮಪೇಕ್ಷಿತವಾನ್ ಮುನಿ
ತತ್‌ಲಬ್ಧ್ವಾ ಸಮೋಽಸ್ತಿ ನ ಮಮೇತ್ಯವದಚ್ಚತುರ್ಥೇ ||

ನಮ್ಮಾಳ್ವಾರರು ಇದಕ್ಕೆ ಮುಂಚೆ ಸ್ವರೂಪರೂಪ ಗುಣ ಚೇಷ್ಟಾದಿಗಳನ್ನು ಅತ್ಯಾದರದಿಂದ ಅನುಸಂದಿಸುವೆನೆಂಬುವುದಾಗಿ ಕೋರಿದ ಕೋರಿಕೆಯನ್ನು ನೆರವೇರಿಸಲು ಸರ್ವೇಶ್ವರನು ತನ್ನ ಗುಣ ಚೇಷ್ಟಿತಾದಿಗಳನ್ನು ಪ್ರದರ್ಶಿಸಲು ಅವನ್ನು ಸಂಪೂರ್ಣವಾಗಿ ಅನುಬವಿಸಿ ಇನ್ನು ಮೇಲೆ ನನ್ನ ಸಮಾನರು ಯಾರೂ ಇಲ್ಲವೆಂದು ಈ ತಿರುವಾಯ್ ಮೊಳಿಯಲ್ಲಿ ಆನಂದಬರಿತರಾಗಿ ಪ್ರತಿಪಾದಿಸುತ್ತಿರುವರು

ತುವಳಿಲ್

ತಸ್ಯಾಪಿ ಮಾನಸತಯಾಽನುಬವಸ್ಯ ಬಾಹ್ಯ -
ಸಂಶ್ಲೇಷಣೈಕ -- ಪರಚಿತ್ತ--ಮನಶ್ಯರಿ ರ
ಆತ್ಮಾನುರಕ್ತ ಜನಮಾತ್ಮನಿ ನಿಸ್ಪೃಹತ್ವಂ
ನಿನ್ಯೇಽದಿ ಪಂಚಮ ಮತಿಪ್ರವಣೋಽಚ್ಯುತೇ ಸ ||

ಐದನೆಯ ದಶಕದಲ್ಲಿ ನಮ್ಮಾಳ್ವಾರರು ಇದುವರೆಗೂ ತಾವು ಸರ್ವೇಶ್ವರನನ್ನು ಮಾನಸಿಕವಾಗಿ ಅನುಬವಿಸಿದರೂ ಕೂಡ ಅಷ್ಟುಮಾತ್ರದಲ್ಲೇ ತೃಪ್ತಿಹೊಂದದೆ ಪ್ರತ್ಯಕ್ಷವಾಗಿ ಅನುಬವಿಸಬೇಕೆಂದು ಆಸೆಪಟ್ಟು ಬಗವಂತನಲ್ಲಿ ಅತಿ ಪ್ರವಣರಾಗಿ ಇರಲು, ಆಗ ಇವರ ಅತಿ ಪ್ರಾವಣ್ಯವನ್ನು ತಗ್ಗಿಸಲು ಇವರ ಬಂದು ಜನರು ಇವರನ್ನು ತಡೆಯುತ್ತಿರುವುದನ್ನು ಕಂಡು ಅವರನ್ನು ಕುರಿತು ನನ್ನಲ್ಲಿರುವ ಸ್ನೇಹದಿಂದಲೇ ತಾನೇ ನನ್ನನ್ನು ಹೀಗೆ ನಿಷೇದಿಸುತ್ತಿದ್ದೀರಿ ಆದ್ದರಿಂದ ನನ್ನಲ್ಲಿರುವ ಸ್ನೇಹವನ್ನು ಬಿಟ್ಟುಬಿಡಿಯೆಂದು ಉಪದೇಶಿಸುತ್ತಿದ್ದಾರೆ

ಮಾಲುಕ್ಕು

ತಸ್ಮಾತ್ ಪರ ಪ್ರವಣತಾ ವಿಬವಾತ್ಪರಸ್ಮಿ
ಪುಂಸ್ಯೇವ ಪುಂಖಿತಮತಿ ಪುರುಷಾರ್ಥಸಾರೇ
ಸ್ವಸ್ಯ ಸ್ವಕೀಯ ವಿಷಯೇಷ್ವಖಿಲೇಷು ಷಷ್ಠೇ
ಸ್ವೀಯತ್ವ ಬುದ್ಧಿರವಶಾದ್ಗಳಿತೇ ತ್ವವೋಚತ್ ||

ಆರನಯ ದಶಕದಲ್ಲಿ ನಮ್ಮಾಳ್ವಾರರು ತಮಗ ಹಿಂದಿನ ತಿರುವಾಯ್ ಮೊಳಿಯಲ್ಲಿ ಉಂಟಾದ ಸಂಸಾರ ವೈರಾಗ್ಯದಿಂದ ಪರಮ ಪುರುಷನಲ್ಲಿ ಅತಿ ಪ್ರಾವಣ್ಯವುಳ್ಳವರಾಗಿ ಪರಮ ಪುರುಷಾರ್ಥ ಪ್ರಾಪ್ತಿಯಲ್ಲಿ ಅತ್ಯಾದರವುಳ್ಳವರಾಗಿರಲು ತಮ್ಮ ಶರೀರಾದಿ ಸಕಲ ಪದಾರ್ಥಗಳಲ್ಲಿ ತಮಗ ತನ್ನದು ಎಂಬ ಮಮಕಾರವು ಬಿಟ್ಟುಹೋಯಿತು ಎಂಬುವುದಾಗಿ ಹೆ ಳುತ್ತಾರ

ಉಣ್ಣುಮ್

ಕೃಷ್ಣೇನ ದಾರಯಿತೃ ಪೋಷಕ ಬೋಗ್ಯ ಯೋಗೀ
ಪ್ರಾಪ್ತಾವತಿತ್ವರಿತದೀ ರಖಿಲಾರ್ಥ ವಿಹಾಯ
ಸ್ವಾವಸ್ಥ ಲಬ್ಧಪುಂ ಇತ್ತವಹೀಯಮಾನ
ಪಾರ್ಶ್ವಸ್ಥಿತೈ ಮುನಿರಬೂ ದದಿ ಸಪ್ತಮಂ ಸ ||

"ಉಣ್ಣುಂ ಶೋರುಂ" ಎಂಬುವ ತಿರುವಾಯ್ ಮೊಳಿಯಲ್ಲಿ ನಮ್ಮಾಳ್ವಾರರು ಸರ್ವೇಶ್ವರನನ್ನೇ ದಾರಕ, ಪೋಷಕ, ಬೋಗ್ಯಗಳಾಗಿ ನನೆದು ಇತರವಾದ ಅನ್ನ ಪಾನಾದಿಗಳನ್ನು ಬಿಟ್ಟು ಬಗವತ್ ಪ್ರಾಪ್ತಿಯಲ್ಲಿ ಅತಿತ್ವರೆ ಪಡುತ್ತಿರಲು ಇವರನ್ನು ಹತ್ತಿರವಿದ್ದ ಶ್ರೀ ವೈಷ್ಣವರು ನೋಡಿ ಇವರ ಪ್ರಯತ್ನವು ಸಫಲವಾಗುವುದೋ ಇಲ್ಲವೋ ಎಂಬುವುದಾಗಿ ದು ಖ ಪಡುತ್ತಿದ್ದಾರೆಂಬುವುದಾಗಿ ಹೇಳುತ್ತಾರೆ

ಪೊನ್ನುಲಕು

ಅಪ್ಯೇವ ಮಾತ್ಮ ಪಲದಾನ ವಿಲಂಬವಂತ -
ಮಾಲೋಕ್ಯ ಶೌರಿಮದ ಯತ್ರ ಚ ಕುತ್ರ ಚಾ ಪಿ
ಆವೇದ್ಯ ಮತ್ಸ್ಥಿತಿ ಮದೀನ ವಿಭೂತಿಯುಗ್ಮಾ
ಸ್ವಾತೇತ್ಯಯಾಚತ ಸತೋ ಮುನಿರಷ್ಟಮೇನ ||

ಆರನೆಯ ಶತಕದ ಎಂಟನೆಯ ದಶಕದಲ್ಲಿ ನಮ್ಮಾಳ್ವಾರರು ತಮಗೆ ಸರ್ವೇಶ್ವರನು ತನ್ನ ಶ್ರೀಪಾದಗಳನ್ನು ಸಾವದಾನವಾಗಿ ಕೃಪೆ ಮಾಡುವನೆಂದು ನಿಶ್ಚಯಿಸಿ ಅಷ್ಟು ಸಾವಕಾಶವನ್ನು ಸಹಿಸದವರಾಗಿ ಘಟಕರಾದ ಶ್ರೀವೈಷ್ಣವರನ್ನು ನೋಡಿ "ನಾನು ಕೊಡುತಕ್ಕ ಉಬಯ ವಿಭೂತಿಗಳನ್ನು ಕಾಣಿಕೆಯಾಗಿ ಅಂಗೀಕರಿಸಿ ನೀವು ನನ್ನ ಅವಸ್ಥೆಯನ್ನು ಸರ್ವೇಶ್ವರನಲ್ಲಿ ಬಿನ್ನೈಸಿ ನನ್ನ ಆರ್ತಿಯನ್ನು ಶಮನ ಮಾಡಿರಿ" ಎಂದು ಪ್ರಾರ್ದಿಸುತ್ತಾರೆ

ನೀರಾಯ್

ಆಲೋಕನೇಽಪಿ ದಿಷಯಸ್ಯ ಬೃಶಂ ವಿಭಗ್ನೋ
ರೂಪೇ ಪರೇಸ್ಸಕಲ ಲೋಕಮಯೇ ನಿರಾಶ
ಅಪ್ರಾಕೃತೇ ವಪುಷಿ ಲೋಲಮನಾಸ್ತಮುಚ್ಛೈ
ಆಕಾರಯತ್ತ್ವಲಪಿತ್ಯರ್ನವಮೇ ಶರಾರಿ

"ನೀರಾಯ್" ಎಂಬ ತಿರುವಾಯ್ ಮೊಳಿಯಲ್ಲಿ ನಮ್ಮಾಳ್ವಾರರು ಲೌಕಿಕ ಪದಾರ್ಥ ಸಂಸರ್ಗದಲ್ಲಿ ವಿರಕ್ತವಾಗಿ ಜಗದಾಕಾರವಾದ ಸರ್ವೇಶ್ವರನ ಸ್ವರೂಪವನ್ನು ಉಪೇಕ್ಷಿಸಿ ಪರಮ ಪದದಲ್ಲಿ ದಯಮಾಡಿ ರುವ ಅಪ್ರಾಕೃತ ದಿವ್ಯ ಮಂಗಲ ವಿಗ್ರಹವನ್ನು ಆಶೆಪಟ್ಟು ಅಲ್ಲಿರುವಂತಹವನಿಗೆ ತಮ್ಮ ಆರ್ತಧ್ವನಿ ಕೇಳುವಂತೆ ಆ ಸರ್ವೇಶ್ವರನನ್ನು ತಮ್ಮ ಹತ್ತಿರಕ್ಕೆ ಬರುವಂತೆ ಗಟ್ಟಿಯಾಗಿ ಕೂಗಿದರು

ಉಲಗಮಂಡ ಪೆರುವಾಯಾ

ಆರ್ತೇ ಸ್ವದಾಗತತಯಾ ಮುನಿರಬ್ಜವಾಸಾ
ಮಾಶ್ರಿತ್ಯ ಸಂಘಟನ ಕರ್ಮಣಿ ಜಾಗರೂಕಾಮ್
ಆವೇದ್ಯ ಚಾ ದಿದಶಮಂ ಸ್ವಮಕಿಂಚನತ್ವಂ
ಶ್ರೀ ವೇಂಕಟೇಶ ಚರಣೌ ಶರಣಂ ಪ್ರಪದ್ಯೇ ||

ಉಲಗಮುಂಡ-ಯೆಂಬುವ ತಿರುವಾಯ್ ಮೊಳಿಯಲ್ಲಿ ನಮ್ಮಾಳ್ವಾರರು ಬಗವದ್ವಿಶ್ಲೇಷದಲ್ಲಿ ತಮಗೆ ಉಂಟಾದ ಅಪಾರವಾದ ದು ಖವನ್ನು ಸಹಿಸಲಾರದೆ ಶ್ರೀಲಕ್ಷ್ಮೀ ದೇವಿಯನ್ನು ಪುರುಷಕಾರವಾಗಿ ಮಾಡಿಕೊಂಡು ತಮ್ಮ ದು ಖವನ್ನೂ ಸಾದನಾಂತರ ಶೂನ್ಯತಯನ್ನೂ ನಿರುಪಾತಿಯ ಶ್ರೀನಿವಾಸ ದೇವರನ್ನು ಕುರಿತು ಬಿನ್ನಸಿ ತಮ್ಮ ಅಬೀಷ್ಟಸಿದ್ಧಿಗಾಗಿ ಆ ತಿರುವೇಂಗಡಮುಡೈಯನ ಪಾದಪದ್ಮಗಳನ್ನೇ ಉಪಾಯವಾಗಿ ನಂಬಿ ಶರಣಾಗತಿಯನ್ನು (ಪ್ರಪತ್ತಿಯನ್ನು) ಮಾಡಿದರು

ಉಣ್ಣಿಲಾವಿಯ

ಆದ್ಯೇ ಮುನಿಸ್ಸ ಶತಕಸ್ಯ ತು ಸಪ್ತಮಸ್ಯ
ತಸ್ಮಿನ್ನಪಿ ಪ್ರಪದನೇ ವಿಪಲೇ ವಿಷಣ್ಣ
ಈಶೇನ ಪಾತಿತಮಿವ ಸ್ವಮವೇಕ್ಷ್ಯ ಗರ್ತೇ
ತಸ್ಮೈ ಸ್ವಬೀತಿಮವದದ್ವಿಷಯೇಂದ್ರಿಯೇಬ್ಯ ||

ಉಣ್ಣಿಲಾವಿಯ ಎಂಬ ಏಳನೆಯ ಶತಕದ ಮೊದಲನೆಯ ದಶಕದಲ್ಲಿ ನಮ್ಮಾಳ್ವಾರರು 'ಉಲಗಮುಂಡ' ಎಂಬುವ ತಿರುವಾಯ್ ಮೊಳಿಯಲ್ಲಿ ತಾವು ಶ್ರೀ ವೆಂಕಟೇಶನಲ್ಲಿ ಮಾಡಿದ ಅಮೋಘವಾದ ಪೂರ್ಣ ಪ್ರಪತ್ತಿಯು ಪಲಿಸದೆ ಹೋದದ್ದರಿಂದ ಸರ್ವೇಶ್ವರನು ತನ್ನನ್ನು ಕಟಾಕ್ಷಿಸದೇ ಸಂಸಾರದಲ್ಲಿ ತಳ್ಳಿದನೆಂದು ಬಹಳವಾಗಿ ದು ಖಿಸಿ ಅತಿ ಘೋರವಾದ ಸಂಸಾರದಲ್ಲಿರುವ ವಿಷಯಾದಿಗಳನ್ನು ತದನುಬವ ಯೋಗ್ಯಗಳಾದ ತಮ್ಮ ಇಂದ್ರಿಯಗಳನ್ನು ನೋಡಿ ಬಯಪಟ್ಟು ತಮ್ಮ ಬಯವನ್ನು ಬಗವಂತನಲ್ಲಿ ಬಿನ್ನೈಸಿದರು

ಕಂಗಲುಂ

ಆತ್ಮಪ್ರಬನ್ಧಮಸಮಾಪ್ಯ ಹಿತಂ ಜನಾನಾಂ
ಆಶ್ಚರ್ಯಮಕ್ರಮತಯಾ ಹರಿಣಾ ಪ್ರದಾತುಂ
ಶ್ರೀರಂಗಿಣಾಽಪ್ಯ ಸುಶಕ ಪ್ರಶಮಾರ್ದಚಿಂತಾಂ
ಭೂಯಸ್ತರಾಮರತಿಮಾಪ ಮುನಿರ್ದ್ವಿತೀಯೇ ||

ಹಿಂದಿನ ಪಾಶುರದಲ್ಲಿ ಆಳ್ವಾರರು ಶ್ರೀರಂಗನಾದನ ಅಡಿದಾವರಗಳಲ್ಲಿ ಪ್ರಪತ್ತನೆ ಮಾಡಿದ್ದರೂ ಲೋಕಹಿತಕ್ಕಾಗಿ ಇವರು ಪ್ರಾರಂಬಿಸಿದ ತಿರುವಾಯ್ ಮೊಳಿ ಪ್ರಬಂದವು ಪೂರ್ತಿಯಾದನಂತರ ಇವರು ಅಭೀಷ್ಟವನ್ನು ನೆರವೇರಿಸುವೆನೆಂದು ಶ್ರೀರಂಗನಾದನು ಇವರು ಅಪೇಕ್ಷಿಸಿದಾ

ಗಲೇ ಇವರ ಕೋರಿಕೆಯಾದ ಪರಮ ಪದವನ್ನು ಪ್ರಸಾದಿಸದೇ ಹೋದ್ದ ರಿಂದ ಅಷ್ಟು ಮಾತ್ರ ವಿಳಂಬವನ್ನೂ ಸಹಿಸಲಾರದವರಾಗಿ ಮಹತ್ತಾದ ದು ಖವನ್ನು ಹೊಂದಿದರು

ವೆಳ್ಳಿಚುರಿಶಙ್ಗು

ಶ್ರೀರಂಗ ಚರ್ತುರಶರಣ್ಯ ಶರಣ್ಯಬಾವ -
ಪ್ರಸ್ತಾವಲಬ್ಧ ವೃತಿರಸ್ಯ ಗತೌ ಸ ಬೂಯ
ಸ್ಪರ್ಸ್ಕಿ ಹಿತ--ಪ್ರಿಯ ಪರೇತರ ನಿರ್ದಿಶೇಷ
ಮಾಶೀದವಾರ್ಯ- ಬಹುಳಾಬಿರುಚಿಸ್ತೃತಿಯೇ ||

ಈ ದಶಕದಲ್ಲಿ ಮುನಿವರ್ಯರು ನಾಯಿಕಾರೂಪವನ್ನು ಅಂಗೀ ಕರಿಸಿ ತಿರುಪ್ಪೇರ್ರೈಯೆಂಬ ದಿವ್ಯದೇಶಕ್ಕೆ ಹೋಗಲು ಯತ್ನಿಸಲು ಆಗ ತನ್ನ ಮನೆಯನ್ನು ಬಿಟ್ಟು ನಾಯಕನಿರುವ ಸ್ಥಳಕ್ಕೆ ಹೋಗುವುದು ಕುಲ ಧರ್ಮವಲ್ಲ ಎಂಬುವುದಾಗಿ ಸಖಿಯರು ಮಿಕ್ಕವರು ನಿಷೇದಿಸಿದರೂ ಶ್ರೀ ಬಗವಂತನ ಗುಣಗಳನ್ನು ಕೇಳಿ ಅವನನ್ನು ಸೇವಿಸಲು ಯಾರನ್ನೂ ಲಕ್ಷಿಸದೇ ಅಲ್ಲಿಗೆ ಹೋಗಲು ಯತ್ನಿಸಿದರು

ಆಳಿಯೆಳ ಶಙ್ಗುಮ್

ಆತನ್ವತಾ ಹಿತಮದಾತ್ಮದಶಾನುರೂಪ
ಮಾವಿಷ್ಕೃತಾ ನನುಪರ್ಮಾ ಪುರುಷೋತ್ತಮೇನ
ಆತ್ಮಾಪ್ರದಾನ ವಿಬವಾ ನತಿಲೋಬನೀಯಾನ್
ಅದ್ರಕ್ಷರ್ಯ ಶರಜಿದನ್ವಬವ ಚ್ಚತುರ್ಥೇ||

ಆಳಿಯೆಳ ಎಂಬುವ ತಿರುವಾಯ್ ಮೊಳಿಯಲ್ಲಿ ನಮ್ಮಾಳ್ವಾರರು ಬಗವದಲಾಬದಿಂದ ತಮಗುಂಟಾದ ದು ಖವನ್ನು ಶಮನ ಪಡಿಸಲು ಪ್ರಯತ್ನಿಸಿದ ಸರ್ವೇಶ್ವರನು ನಿರುಪಮಾನಗಳಾಗಿ ಅತ್ಯಾಶ್ಚರ್ಯಕರಗ ಳಾದ ತನ್ನ ದಿವ್ಯ ಚೇಷ್ಟಿತಗಳನ್ನು ಪ್ರಕಾಶ ಪಡಿಸಲು ಅವನ್ನು ಸಾಕ್ಷಾ ತ್ಕರಿಸಿ ಯದಾಮನೋರದವಾಗಿ ಅನುಬವಿಸಿದರು

ಕರ್ಬಾರಿರಾಮ ಪಿರಾನ್ನೈ

ಆತ್ಮೈಕ ರಕ್ಷಣ ಪರಾನವತಾರ ಹೇತೂನ್
ಅನ್ಯಾ ದೃಶ್ಯಾ ಗುಣಗಣಾನಪಹಾಯ ಶೌರೇ
ಅನ್ಯತ್ ಕಥಂ ಮತಿಮತಾ ಮವದೋದನೀಯ
ಮಿತ್ಯಾನ್ಯ ಪರ್ಯ ಮಲುನಾ ದದಿಪಂಚಮಂ ಸ

"ಕರ್ಪಾರ್"ಯೆಂಬ ತಿರುವಾಯ್ ಮೊಳಿ ದಶಕದಲ್ಲಿ ನಮ್ಮಾಳ್ವಾ ರರು ರಾಮಕೃಷ್ಣಾದ್ಯನೇಕಾವತಾರಗಳನ್ನು ದರಿಸಿ ಸಕಲ ಪ್ರಾಣಿಗಳನ್ನು ರಕ್ಷಿಸಲು ಕಾರಣವಾದ ಸರ್ವೇಶ್ವರನ ಕಲ್ಯಾಣ ಗುಣಗುಣಗಳನ್ನು ತ್ಯಜಿಸಿ ಬುದ್ಧಿವಂತರು ಬೇರೊಂದು ವಸ್ತುವನ್ನು ಪುರಸ್ಕರಿಸರು ಎಂದು ತಮ್ಮ ಅನನ್ಯ ಪರತಯನ್ನು ಹೇಳಿದರು

ಪಾಮರು ಮೂವುಲಗಂ

ತಾದೃಗ್ಗುಣ ಪ್ರದಿಶದಾನುಭವ ಪ್ರವೃದ್ಧ--
ಸಾಪೇಕ್ಷಿತಾಬಿರುಚಿತಾರ್ತಿ ಮಹಾರ್ಣವಸ್ಥ
ಪ್ರಾಪ್ಯಂ ಶರಣ್ಯಮಪಿ ವೀಕ್ಷ್ಯ ಕದಾನುಗಸ್ಯಾ
ಮಂಪ್ರೇ ಸ್ತವೇತಿ ವಿಲಲಾಪ ಮುನಿಸ್ಸ ಷಷ್ಠೇ||

'ಪಾಮರು' ಎಂಬ ತಿರುವಾಯ್ ಮೊಳಿ ದಶಕದಲ್ಲಿ ನಮ್ಮಾಳ್ವಾ ರರು ತಾವು ಮಾನಸಿಕವಾಗಿ ಅನುಬವಿಸಿದ ಬಗವಂತನ ಕಲ್ಯಾಣಗುಣಗ ಳನ್ನು ಪ್ರತ್ಯಕ್ಷವಾಗಿ ದು ಖ ಸಾಗರದಲ್ಲಿ ಮಗ್ನರಾದವರಾಗಿ, ಶೇಷಿಯೂ, ಶರಣ್ಯನೂ ಆದ ಸರ್ವೇಶ್ವರನನ್ನು ಕುರಿತು ನಿನ್ನ ಪಾದಾರವಿಂದಗಳನ್ನು ಹೊಂದಿ ಸದಾ ಪರಿಚರ್ಯಾಪರನಾಗಿ ನಾನು ಯಾವಾಗ ಆಗುವೆನೋ ಎಂದು ಕಳಕಳಿಯಿಂದ ದು ಖಿತರಾದರು

ಏಳ್ಳೆಯಾರ್

ತತ್ರಾರ್ದಿತಾನದಿಗಮೇಽಪಿ ಚ ಬಾವನಾಯಾ
ಬೂಮ್ನಾ ಪುರಸ್ಥಿತಮಿವಾನನ ಮಚ್ಯುತಸ್ಯ
ಆತ್ಕೊ ಕಯನ್ನಪಿ ಕರೇಣ ನ ಸಂಸ್ಪರ್ಶ ಸ
ಪೀಡಾಮವಾಪ ಮಹತೀಮದ ಸಪ್ತಮೇನ||

ಈ ಏಳ್ಳೆಯರ್ ಎಂಬ ತಿರುವಾಯ್ ಮೊಳಿ ದಶಕದಲ್ಲಿ ನಮ್ಮಾ ಳ್ವಾರರು ತಾವು ಆಸೆಪಟ್ಟ ಬಗವದ್ಗುಣಗಳನ್ನು ಸಾಕ್ಷಾತ್ತಾಗಿ ಅನುಬ ವಿಸದೇ ಹೋದರೂ, ಅನವರತ ಬಾವನಯಿಂದ ಆತನ ತಿರುಮುಖ ಮಂಡಲವನ್ನು ತಮ್ಮ ಮುಂದೆ ನೋಡುತ್ತಿರುವಂತೆ ದ್ಯಾನಿಸುತ್ತಾ ತಮ್ಮ ಶ್ರೀ ಹಸ್ತದಿಂದ ಆ ತಿರುಮುಖವನ್ನು ಮುಟ್ಟಲು ಹೋಗಿ ಅದು ಲಬ್ಯವಾ ಗದೇ ಹೋದದ್ದರಿಂದ ಅದಿಕವಾದ ದು ಖವನ್ನು ಅನುಬವಿಸಿದರು

ಮಾಯಾ ವಾಮನನೇ

ಸಂಗಂ ನಿವರ್ತ್ಯ ಮಮ ಸಂಸೃತಿ ಮಂಡಲೇ ಮಾಂ
ಸಂಸ್ಥಾಪರ್ಯ ಕದಮಸೀತ್ಯನುಬೋದಿತೇನ
ಆಶ್ಚರ್ಯ ಲೋಕ--ತನುತಾಮಪಿ ದರ್ಶಯಿತ್ವಾ
ವಿಸ್ಮಾರಿತ ಕಿಲ ಶುಚಂ ಪರಿಣಾಮಪ್ಯ ಮೇನ||

"ಮಾಯಾ" ಎಂಬುವ ದಶಕದಲ್ಲಿ ನಮ್ಮಾಳ್ವಾರರು ಸರ್ವೇಶ್ವರನು ತಮ್ಮನ್ನು ಸಂಸಾರದಲ್ಲೇ ಇಟ್ಟಿರುವುದನ್ನು ನೋಡಿ ಆಶ್ಚರ್ಯಪಟ್ಟು ಈ ಪರಸ್ಪರ ವಿರುದ್ಧವಾದ ವ್ಯಾಪಾರಗಳನ್ನು ಹೇಗೆ ಮಾಡಿದಿರೆಂದು ಹರಿ ಯನ್ನು ಕೇಳಲು ಸ್ವಾಮಿಯು "ಪರಸ್ಪರ ವಿರುದ್ಧಗಳಾದ ಸಮಸ್ತ ವಸ್ತು ಗಳೂ ನನಗೆ ಶರೀರವಾಗುಳ್ಳ ರೀತಿಯನ್ನು ನೋಡು" ಎಂಬುವುದಾಗಿ ತನ್ನ ವಿರುದ್ಧ ವಿಬೂತಿಕತ್ವವನ್ನು ತೋರಿಸಿ ಇವರ ದು ಖವನ್ನು ಶಮನ ಗೊಳಿಸಿದರು

ಎನ್ನೈಕ್ಕುಮ್

ವೃಷ್ಟ್ವಾ ಫಲಂ ಸ್ವವಸತೇರಿಹ ದುಶ್ಯಕಾಯಾ
ಸ್ತೇನ ಪ್ರಬಂದರಚನಾಂ ಫಲಮಾಪ ಶೌರಿ
ಅನ್ಯೇಷು ಸತ್ಸ್ವಪಿ ತದಾ ಸ್ವಮಪೇಕ್ಷಮಾಣ
ಮಪ್ರತ್ಯುಪಕ್ರಿಯಮಮುಂ ನವಮೇ ಜಗೌ ಸ ||

"ಎನ್ನೈಕ್ಕುಂ" ಯೆಂಬುವ ತಿರುವಾಯ್ ದಶಕದಲ್ಲಿ ನಮ್ಮಾಳ್ವಾ ರರು "ಹೀಗೆ ಆರ್ತನಾದ ನನ್ನನ್ನು ಈ ಲೋಕದಲ್ಲಿಟ್ಟಿರಲು ಕಾರಣ

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ ಪರಂಪರೆ ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ನಸ್ಯಗಳ ಬಗೆಗಳನ್ನೂ ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೮ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿ ನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ

ವೈಷ್ಣವತೆಯ ಉಗಮ ವಿಕಾಸ ವಾಸುದೇವ ವೃಷ್ಣಿಕುಂಜ ನಿಂದ ಆರಂಭವಾದ ಈ ವೈಷ್ಣವ ಧರ್ಮ ಇಂದು ಇನ್ನೂರಕ್ಕೂ ಮಿಗಿಲಾಗಿ ಉಪಶಾಖೆಗಳಾಗಿ ಭಾರತದಲ್ಲೆಲ್ಲ ಹರಡಿದೆ ದಕ್ಷಿಣ ಭಾರತದಲ್ಲಿನ ವೈಷ್ಣವ ಧರ್ಮ ವೈಖಾನಸ ಹಾಗೂ ಪಾಂಚರಾತ್ರಾಗಮಗಳಿಂದ ವಿಶೇಷ ಪ್ರಭಾವಿತವಾದದ್ದನ್ನು ಶಿಲ್ಪಗಳ ಚಿತ್ರಗಳನ್ನು ತೋರಿಸಿ ಅವುಗಳ ಬಹಿರಂಗ ಅರ್ಥವನ್ನೂ ಗೂಢಾರ್ಥವನ್ನೂ ವಿವರಿಸಲಾಗಿದೆ ಈ ವಿಭಾಗದಲ್ಲಿ ೧೦ನೇ ಶತಮಾನದ ವಿಶಿಷ್ಟ ವಿಗ್ರಹಗಳಿದ್ದು ಅವುಗಳನ್ನು ನಾಗುಲಾಪುರಂ ದೇವಾಲಯದಿಂದ ಸಂಗ್ರಹಿಸಲಾಗಿದೆ

ವಾಸ್ತುಶಾಸ್ತ್ರ ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ ಭೂಶುದ್ಧಿ ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ ಭಂಗಿಗಳೂ ಆಭರಣಗಳೂ ಪ್ರಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ತ್ವದ ಪ್ರವರ್ತ್ತಿ ಮಾರ್ಗಕ್ಕೆ ಆಳ್ವಾರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕರೆ ಹರಿದಾಸರ ಹಿರಿಮೆಯನ್ನೂ, ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು ಶಕ್ತಿ ಷಣ್ಮುಖ ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ ಇಶೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

ಪರಂಪರೆಯ ಪರಿಚಯ ಹೊಂದಿರಿ ಒಮ್ಮೆ ಭೇಟಿ ನೀಡಿರಿ

---

**ಕಾಲ ಬೆಳಗ್ಗೆ ೮ ರಿಂದ ರಾತ್ರಿ ೮**

**ಟಿಕೆಟ್ ರೂ ೧-೦೦ (ಹಿರಿಯರಿಗೆ)**
**" " ೦-೫೦ (ಕಿರಿಯರಿಗೆ)**

ವೇನಂದು" ಸರ್ವೇಶ್ವರನನ್ನು ಕೇಳಲು ಅದಕ್ಕೆ ಸರ್ವೇಶ್ವರನು "ಈ ತಿರುವಾಯ್ ಮೊಳಿ ಪ್ರಬಂಧವು ಪೂರ್ತಿಯಾಗಿ ರಚಿಸುವವರಗೂ ನೀವು ಇಲ್ಲಿಯೇ ಇರಬೇಕು"ಯೆಂದು ಹೇಳಲು ಅದನ್ನು ಕೇಳಿ ವ್ಯಾಸಾದಿ ಮಹಾ ಪ್ರಾಜ್ಞರು ಇರುವಾಗ ಈ ಕಾರ್ಯಕ್ಕಾಗಿ ತನ್ನನ್ನು ಅಂಗೀಕರಿಸಿದ್ದಕ್ಕಾಗಿ ತಕ್ಕ ಪ್ರತ್ಯುಪಕಾರವೇನೂ ಇಲ್ಲವೆಂದು ಹೇಳಿದರು

ಇನ್ಬಮ್

ಆನಂದ ಮಾಕಲಯಿತುಂ ಕಮಲಾಸಖಸ್ಯ
ಸಂಶ್ರಾವ್ಯ ತತ್ಕರುಣಯಾ ಸ್ವಕೃತಂ ಪ್ರಬನ್ಧಮ್
ಅರ್ಪೇ ತದಾವರಣ ಶಾಲಿನಿ ದಿವ್ಯ ದೇಶೇ
ಯಾತ್ರಾ ಮನೋರಥಮಸೌ ದಶಮೇ ಚಕಾರ ||

"ಇನ್ಬಂ ಪಯಕ್ಕ"ಯೆಂಬುವ ತಿರುವಾಯ್ ಮೊಳಿ ದಶಕದಲ್ಲಿ ನಮ್ಮಾಳ್ವಾರರು ಸರ್ವೇಶ್ವರನ ಅನುಗ್ರಹದಿಂದ ತಾವು ಕೃತಿಮಾಡಿದ ತಿರುವಾಯ್ ಮೊಳಿಯನ್ನು ತಿರುವಾರ್ಱ ವಿಳ್ಳೈಯೆಂಬ ದಿವ್ಯ ದೇಶದಲ್ಲಿರುವ ಪ್ರಿಯ ಪತಿಯನ್ನು ಕಾಣಲು ಸಂಕಲ್ಪಿಸಿ ಅದನ್ನು ಅಲ್ಲಿ ಅರ್ಪಿಸಲು ಮನಸ್ಸು ಮಾಡಿ ಯಾತ್ರೆಯನ್ನು ಕೈಗೊಂಡರು

ತೀವಿಯಾರ್

ಆದ್ಯೇಽಷ್ಟಮಸ್ಯ ಶತಕಸ್ಯ ಯದೇಷ್ಟಸಿದ್ಧಿಂ
ಅಪ್ರಾಪ್ಯ ಖಿನ್ನಮತಿರಾಶ್ರಿತ ಪಾರತನ್ತ್ರ್ಯಮ್
ಸರ್ವೇಶ್ವರತ್ವಮಪಿ ಶಂಕಿತವಾನ್ ಶಠಾರಿ
ರೀಶಸ್ಯ ತೇನ ಪುನರೇವ ವಿಬೋಧಿತಶ್ಚ ||

ಎಂಟುನೂರು ಮೊದಲನೆಯ ದಶಕದ ತಿರುವಾಯ್ ಮೊಳಿಯಲ್ಲಿ ನಮ್ಮಾಳ್ವಾರರು ತಾವು ಆಲೋಚಿಸಿದ ಪ್ರಕಾರ ಫಲ ಸಿದ್ಧಿಸದೇ ಹೋದದ್ದರಿಂದ ಆರ್ತರಾಗಿ ಸರ್ವೇಶ್ವರನಲ್ಲಿ ಭಕ್ತ ರಕ್ಷಣ ಹೇತುಗಳಾದ ಸರ್ವೇಶ್ವರತ್ವ ಆಶ್ರಿತಪಾರತಂತ್ರ್ಯಗಳೆಂಬ ಎರಡು ಗುಣಗಳು ಇವೆಯೋ ಇಲ್ಲವೋ ಎಂಬುವುದಾಗಿ ಸಂಶಯ ಪಟ್ಟಾಗ ಸರ್ವೇಶ್ವರನು ಇವರಿಗೆ ವಿಶ್ವಾಸವುಂಟುಮಾಡಲು ಹಿಂದಿನ ಉಪಕಾರವನ್ನು ಜ್ಞಾಪಿಸಲು ಆ ಪರಮಾತ್ಮನಿಗೆ ಈ ಎರಡು ಗುಣಗಳೂ ಇವೆಯೆಂಬುವುದಾಗಿ ನಿಶ್ಚಯಿಸಿ ಸಂತೋಷಿತರಾದರು

ನಂಗಳ್

ಸಂಪ್ರಾಪಕೇಽಪಿ ಚ ವಿಭೌ ನಿಜವಾಂಛಿತಾರ್ಥ
ಪ್ರಾಪ್ತೇರ್ವಿಘಾತ ಇತರೇಷು ಚ ಪಾಶಲೇಶ
ಸ್ವಸ್ಯೇತಿ ಶಂಕಿತಮನಾ ಸ್ವಹಿತೇಽಪಿ ವರ್ಗೇ
ಸ್ವಸ್ಮಿನ್ನಪಿ ಪ್ರವಣತಾಂ ಮುಮುಚೇ ದ್ವಿತೀಯೇ ||

ನಂಗಳ್ ಎಂಬುವ ದಶಕದಲ್ಲಿ ಆಳ್ವಾರರು ತಮ್ಮ ಅಭೀಷ್ಟ ಸಿದ್ಧಿಗೆ ಸರ್ವೇಶ್ವರನು ಪ್ರಾಪಕನಾಗಿದ್ದರೂ ತಮ್ಮ ವಾಂಛಿತಾರ್ಥವು ಸಿದ್ಧಿಸದೇ ಹೋದದ್ದರಿಂದ ಇದಕ್ಕೆ ಕಾರಣವೇನಂದು ಆಲೋಚಿಸಿ ಅದಕ್ಕೆ ಪ್ರತಿಬಂಧಕವಾದ ಸಾಂಸಾರಿಕ ವಸ್ತುಗಳಲ್ಲಿ ಆಶಾಲೇಶವು ತಮಗೆ ಇದೆಯೆ ನೋ ಎಂದು ಸಂಶಯಗೊಂಡು ತನ್ನಲ್ಲೂ ತನ್ನ ಸಂಬಂಧಿಗಳಲ್ಲೂ ತಮಗೆ ಯಾವ ವಿಧವಾದ ಸ್ನೇಹವಿಲ್ಲವೆಂದು ತಿಳಿಸಿದರು

ಅಂಗುಮಿಂಗುಂ

ಪ್ರೇಮಾಧಿಕ್ಯೇನ ವಿವಶಸ್ಸುಕುಮಾರಮೂರ್ತೇಃ
ಕ್ಷೇಮಾಯ ಖಿನ್ನ ಹೃದಯ ಪುರುಷೋ ಭ್ರಮಸ್ಯ
ತದ್ದರ್ಶಿತಾತ್ಮಪರ ನಿತ್ಯ ಮುಮುಕ್ಷು ಮುಕ್ತ್ಯಾ
ಕಿಂಚಿತ್ ಸಮಾಹಿತ ಮನಾಶ್ಶಠಜಿತ್ತೃತೀಯೇ ||

"ಅಂಗುಮಿಂಗುಂ" ಎಂಬುವ ದಶಕದಲ್ಲಿ ಸರ್ವೇಶ್ವರನಲ್ಲಿ ಪ್ರೇಮವುಳ್ಳ ನಮ್ಮಾಳ್ವಾರರು ಆತನ ಸುಕುಮಾರವಾದ ಶರೀರಕ್ಕೆ ಮಂಗಳಾಶಾಸನವನ್ನು ಮಾಡುವವರು ಯಾರೂ ಇಲ್ಲವೆ? ಎಂದು ದುಃಖಾಕ್ರಾಂತರಾಗಿರಲು ಇವರ ದುಃಖವನ್ನು ಶಮನ ಮಾಡಲು ಸರ್ವೇಶ್ವರನು ತನ್ನ ಮಂಗಳಾಶಾಸನದಲ್ಲಿ ತತ್ಪರರಾಗಿ ಪರಮ ಪದದಲ್ಲಿ ಮುಕ್ತರೂ ಲೀಲಾ ವಿಭೂತಿಯಲ್ಲಿ ಮುಮುಕ್ಷುಗಳೂ ಇದ್ದಾರೆಂಬುದಾಗಿ ಇವರಿಗೆ ಪ್ರದರ್ಶಿಸಲು ತರುವಾಯ ಆಳ್ವಾರರು ಸಮಾಧಾನಗೊಂಡರು

ವಾರ್ ಕಡಾ

ಕ್ಷೇಮಂ ಸ್ವಶೌರ್ಯಮಧಿಕಂ ವಿಮಲೈರದೃಷ್ಟಂ
ಗ್ರಾಮಂ ಚ ಕಂಚನ ನಿಜಾವಸಥಾಯ ಮಾನಮ್
ತತ್ರ ದ್ವಿಜಾನರಿಜಿತ ಸ್ವಸಮರ್ಥಾ ಪ್ರದರ್ಶ್ಯ
ಚಿಚ್ಛೇ ರಥಾರಿ ನಿತರಾಂ ಸ ಮುನಿಶ್ಚತುರ್ಥೇ ||

ವಾರ್‌ಕಡಾ ದಶಕದಲ್ಲಿ ನನಗೆ ಮಂಗಳಾಶಾಸನ ಮಾಡುವವರು ಅನೇಕರಿದ್ದಾರೆಯೆಂದು ತಿಳಿಯಪಡಿಸಿ ಅವರ ಭಯವನ್ನು ಹೋಗಲಾಡಿಸಿದರೂ, ಆ ಭಯವು ಪುನಃ ಪ್ರಾಪ್ತವಾಗದ ಹಾಗೆ ತನ್ನ ಶೌರ್ಯಾದಿಗಳನ್ನು ಶತ್ರುಗಳಿಗೆ ಆಕ್ರಮಣ ಮಾಡಲಾಗದ ತಿರುಚ್ಚೆಂಗನೂರು ಎಂಬ ತಾನು ವಾಸಿಸುತ್ತಿರುವ ದಿವ್ಯದೇಶವನ್ನು ಅಲ್ಲಿಗೆ ಶತ್ರು ನಿರಸನ ಸಮರ್ಥರಾಗಿ ಮಂಗಳಾಶಾಸನ ಪರವಾಗಿ ವಾಸಮಾಡುತ್ತಿರುವ ತನಗೆ ಸದೃಶರಾದ ಶ್ರೀ ವೈಷ್ಣವರನ್ನು ಇವರಿಗೆ ಪ್ರದರ್ಶಿಸಿ ಇವರ ಭಯವನ್ನು ಸರ್ವೇಶ್ವರನು ನಿಶ್ಶೇಷವಾಗಿ ನಾಶಮಾಡಿದನು

ಮಾಯ ಕ್ಕೂತ್ತಾ

ಸುಕ್ಷೇಮ ಸುಂದರ ತನುಂ ಪರಿಲಿಪ್ಸುರೀಶಂ
ಶೋಚನ್ನನಿರ್ದಹನಲೀಢ ಇವಾತಿತಪ್ತ
ಏಷ್ಯೇವ ಮಿತ್ಯುಪಗತಸ್ಯ ಬಹು ಪ್ರಕಾರಾನ್
ಆಖ್ಯಾಯ ಶೌರಿರದಿ ಪಂಚಮ ಮಾಜುಹಾವ ||

(ಮಾಯಕ್ಕೂತ್ತಾ) ಎಂಬುವ ಈ ದಶಕದಲ್ಲಿ ಶ್ರೀ ವೈಷ್ಣವರ ಮಂಗಳಾಶಾಸನದಿಂದ ಸುರಕ್ಷಿತನಾದ ಸರ್ವೇಶ್ವರನ ಸುಂದರವಾದ ದಿವ್ಯ ಮಂಗಳ ವಿಗ್ರಹವನ್ನು ಅನುಭವಿಸಲು ಆಸೆಪಟ್ಟವರಾಗಿ ಆ ಮನೋರಥವು ಲಭಿಸದೆ ಖಿನ್ನರಾಗಿ ದಾವಾನಲದಿಂದ ಆವರಿಸಲ್ಪಟ್ಟಂತೆ ಬಹಳನೊಂದ ಸಕಲ ಇಂದ್ರಿಯಗಳುಳ್ಳವರಾಗಿ ಆಳ್ವಾರರು

"ಎಲ್ಲ ಸರ್ವೇಶ್ವರಾ, ನೀನು ದಿವ್ಯಾವಯವಗಳಿಂದ ಬಂದು ನನಗೆ ದರ್ಶನ ಕೊಡಬೇಕು ದಿವ್ಯಾಬರಣಗಳಿಂದ ಬಂದು ಸೇವ ಸಾದಿಸಬೇಕು, ಕಾಳ ಮೇದಂತ ಬಂದು ಸೇವ ಸಾದಿಸದೇಕು ಉದಯಾದಿತ್ಯನಂತ ದರ್ಶನವನ್ನಿಯಬೇಕು" ಹಿಗ ಅನೇಕ ಪ್ರಕಾರವಾಗಿ ಕೂಗಿದರು

ಎಲ್ಲಿಯುಂ

ಸದ್ಯಸ್ಸ ಸಂಗಮಕೃತೌ ಚವಿತಾನ ಸಾತ್ಮಾ
ಪ್ರೀತಿ ಸ್ವಮೇತಿ ಪರಿರಾಪ್ತು ಮನಾಶ್ಮನ್ಯಮ್ಮಾಮ್
ವೈಕುಣ್ಠತೋಽದಿಗತರ್ವಾ ಮತಿಮಿತ್ಯವನ್ಯಾಂ
ಸ್ಥಾನೇ ಕ್ವಚಿದ್ದಹು ಮತಿಂ ವಿದದೇ ಸ ಷಷ್ಠೇ ||

ಎಲ್ಲಿಯುಂ -ಎಂಬ ಒನೆಯ ಶತಕದ ಆರನೆಯ ದಶಕದಲ್ಲಿ ನಮ್ಮಾಳ್ವಾರರು ಸರ್ವೇಶ್ವರನು ತಮ್ಮದು ಖವನ್ನು ಶಮನ ಮಾಡಲು ತಮ್ಮೊಡನೆ ಸಂಶ್ಲೇಷಿಸಲು ಸಂಕಲ್ಪಿಸಿ ತಕ್ಷಣ ಸಂಕಲ್ಪಿಸಿದರೆ ಇವರಿಗೆ ಅತಿ ಪ್ರೀತಿಯಿಂದ ಯಾವ ಕೇಡು ಉಂಟಾದೀತೊ ಎಂದು ನಿದಾನವಾಗಿ ಕೂಡಲು ಯೋಚಿಸಿ ಶ್ರೀ ವೈಕುಂಠದಿಂದ ಬಂದು "ತಿರುಕ್ಕಡಿ ಕ್ಷಾನ" ಎಂಬ ದಿವ್ಯದೇಶದಲ್ಲಿ ನೆಲೆಸಿರುವನೆಂದು ನಿಶ್ಚಯಿಸಿ ತೃಪ್ತರಾದರು

ಇರುತ್ತುಂ

ಮದ್ವಿಪ್ರಯೋಗಮಸರ್ಹ ಸ್ವಯಮೇವ ಚಾರ್ದೀ
ಮಾಮಲ್ಪಕೈಕನಿಲಯಂ ಬಹುಮನ್ಯಮಾನ
ಶೌರಿಸ್ಸಮಾಶ್ಲಿಷದಿದಂ ಮತಿವಿಭ್ರಮ ಕಿಂ
ಇತ್ಯಾತ್ಮನೋ ಮುದಮಬಾಷತ ಸಪ್ತಮೇನ ||

"ಇರುತ್ತಂ" ಎಂಬ ಈ ದಶಕದಲ್ಲಿ ನಮ್ಮಾಳ್ವಾರರು ಸರ್ವೇಶರನು ನನ್ನ ವಿಶ್ಲೇಷವನ್ನು ಸ್ವಲ್ಪವೂ ಸಹಿಸದವನಾಗಿ ನನ್ನ ದೋಷಗಳನ್ನು ಸ್ವಲ್ಪವೂ ಗಮನಿಸದೇ ನನ್ನ ಸಂಶ್ಲೇಷವನ್ನು ಸ್ವಯಂ ಪುರುಷಾರ್ಥವೆಂದು ಬಗೆದು ಆದರದಿಂದ ಬಂದು ನನ್ನೊಡನೆ ಕೂಡಿದನು ಒಬ್ಬ ಸಂಸಾರಿ ವಿಷಯದಲ್ಲಿ ಪರಾತ್ಪರನಾದ ಆತನು ಹೀಗೆ ಮಾಡಿದ್ದು ಅಸಂಭಾವಿತ ವಾದುದ್ದರಿಂದ ಇದು ನನ್ನ ಭ್ರಮೆಯೋ"ಎಂದು ತಮ್ಮ ಆನಂದವನ್ನು ಪ್ರಕಟಿಸಿದರು

ಕಣ್ಗಳ್

ಸ್ವಾಯೋಗ್ಯತಾ ಮತಿ ನಿವರ್ತನ ಲೋಲುಪೇನ
ಶ್ರೀ ಕೌಸ್ತುಬೇನ ಕಮಲಾಸ್ತನತೋಽಪಿ ತುಲ್ಯಂ
ಆತ್ಮೈಕ ಶೇಷ ಮವದೋದಿತ ಮಿಾಶ್ವರೇಣ
ಸ್ವಸ್ಯ ಸ್ವರೂಪಮವದನ್ನುನಿರಷ್ಟಮೇ ಸ

ಕಣ್‌ಗಳ್ ಎಂಬುವ ದಶಕದಲ್ಲಿ ನಮ್ಮಾಳ್ವಾರರು "ಈ ಆಳ್ವಾರರು ತಮ್ಮನ್ನು ನನ್ನೊಡನೆ ಸಂಶ್ಲೇಷಿಸಲು ಅಯೋಗ್ಯರೆಂದು ಹಿಂಜರಿಯುತ್ತಿದ್ದಾರೆ ಇವರ ಸ್ವರೂಪವನ್ನು ಇವರಿಗೆ ವಿಶದೀಕರಿಸಿ ಆ ಅಯೋಗ್ಯ ತಾನುಸಂಧಾನವನ್ನು ಹೋಗಲಾಡಿಸಬೇಕೆಂದು ಸಂಕಲ್ಪಿಸಿ ನಿಮ್ಮ ಸ್ವರೂಪವು ನನಗೆ ಅತ್ಯಂತ ಅಬಿಮತವಾದ ಕೌಸ್ತುಬಮಣಿಯಿಂದಲೂ, ಶ್ರೀ ಲಕ್ಷ್ಮೀದೇವಿಯ ಸ್ತನಗಳೊಡನೆಯೂ ಸಮಾನವಾಗಿ ನಿರಂತರ ಸಂಶ್ಲೇಷ ಯೋಗ್ಯವಾದುದು" ಎಂದು ಸರ್ವೇಶ್ವರನಿಂದ ಬೋದಿಸಲ್ಪಟ್ಟ ತಮ್ಮ ಸ್ವರೂಪವನ್ನು ಹೇಳಿದರು

(ಸಶೇಷ)

# ವಿಷ್ಣುವಲ್ಲಭೆ ತುಳಸಿ

ವಿಶ್ವೇಶ್ವರ ವಿ ಕೆ

ಪತ್ರಂ ಪುಷ್ಪಂ ಪಲಂ ಮೂಲಂ
ಶಾಖಾತ್ವಕ್ ಸ್ಕಂದಸಂಜ್ಞಿತಮ್ |
ತುಲಸೀ ಸಂಬವಂ ಸರ್ವಂ
ಪಾವನಂ ಮೃತ್ತಿಕಾದಿಕಮ್ ||

ಹೀಗೆನ್ನುತ್ತದೆ ಪದ್ಮಪುರಾಣ ತುಲಸಿಗೆ ಸಂಬಂದಪಟ್ಟವು ಎಲ್ಲವೂ ಎಲೆ, ಹೂವು, ಹಣ್ಣು, ಬೇರು, ಶಾಖೆ, ಕೊನೆಗೆ ಅದು ಬೆಳೆದಿರುವ ಬಾಗದ ಮೃತ್ತಿಕೆಯೂ ಕೂಡಾ ಪರಮ ಪವಿತ್ರವಾದುದು ಎಂದು ಈ ಶ್ಲೋಕದ ಅರ್ದ

ಅಂತೆಯೇ ಬಾರತೀಯ ಸಾಂಸ್ಕೃತಿಕ ಬದುಕಿನಲ್ಲಿ ತುಲಸಿಗೆ ಅತ್ಯಂತ ಮಹತ್ವಪೂರ್ಣವಾದ ಸ್ಥಾನ ಯಾವುದೇ ಒಂದು ಕಟ್ಟಡ 'ಮನೆ' ಎಂದೆನಿಸದೇಕಾದರೆ, ಅದರೆದುರು ತುಳಸೀಕಟ್ಟೆ ಕಾಣಿಸದೇಕು, ಅದರಲ್ಲಿ ತುಲಸಿಯ ಗಿಡ ಶೋಬಿಸುತ್ತಿರಲೇದೇಕು ಸನಾತನಿಯ ಬದುಕಿನ ಜೀವನಾಡಿ ಅದು ಅದಿಲ್ಲದೆ ದೇವರ ಪೂಜೆ ಸಂಪೂರ್ಣವಾಗುವುದಿಲ್ಲ ಅದಿಲ್ಲದ ವಿಷ್ಣುವಿನ ಆರಾದನೆ ಸಮರ್ಪಕವೆನಿಸುವುದಿಲ್ಲ 'ವಿಷ್ಣುಪ್ರಿಯಾ' ಎಂಬ ಹೆಸರು ಅದಕ್ಕೆ 'ಕೇಶವಪ್ರಿಯಾ' ಎಂದು ಕರೆಯುವುದೂ ಅದನ್ನೇ ಬಕ್ತರಿಗೆ ಶ್ರೀಮನ್ನಾರಾಯಣನು ಹೇಗೆ ವಂದನೀಯನೋ, ಅಷ್ಟೇ ಪೂಜನೀಯಳು ತುಳಸೀದೇವಿ

'ವೃಂದಾ' ಎಂಬ ಹೆಸರನ್ನು ಹೊಂದಿರುವ ತುಳಸೀದೇವಿಯು ಜಲಂದರನೆಂಬ ಅಸುರ ಪತ್ನಿಯೂ, ಮಹಾನ್ ಪತಿವ್ರತೆಯೂ ಆಗಿದ್ದಳೆಂದು ಕೆಲವು ಪುರಾಣಗಳಲ್ಲಿ ಹೇಳಲಾಗಿದೆ ಆದರೆ ಇನ್ನು ಕೆಲವು ಮಂದಿ ವಿದ್ವಾಂಸರ ಪ್ರಕಾರ ಆಕೆ ಶಂಖಚೂಡನ ಪತ್ನಿ ನಂದಗೋಕುಲದಲ್ಲಿನ ಗೋಪಿಕಾಸ್ತ್ರೀಯರಲ್ಲೂ ಆಕೆ ಒಬ್ಬಳಾಗಿದ್ದಳೆಂದು ಗುರುತಿಸಲಾಗುತ್ತದೆ

ಏನಿದ್ದರೂ ವಿಷ್ಣುವಿನ ಜೊತೆಗಿನ ತುಳಸಿಯ ಸಂಬಂದ ಮಾತ್ರ ಅನನ್ಯವಾದದ್ದು ತುಳಸಿಯ ಮೇಲೆ ಅನುಗ್ರಹವೃಷ್ಟಿಯನ್ನು 'ಬೀರಿದರೂ, ವಿಷ್ಣುವು ಆಕೆಯನ್ನು ಪತ್ನಿಯಾಗಿ ಸ್ವೀಕರಿಸುವುದಕ್ಕೆ ನಿರಾಕರಣೆಯ ನಾಟಕ ಮಾಡಿದ ನಂತ ಇದರಿಂದ ಕೋಪಗೊಂಡ ಆಕೆ, ಆತನನ್ನು ಶಿಲೆಯಾಗುವಂತ ಶಪಿಸಿ, ಬಳಿಕ ಆ ಎಲೆಗಳನ್ನು ತನ್ನೊಡಲಲ್ಲಿ ಹುದುಗಿಸಿಕೊಂಡ ಗಂಡಕೀ ನದಿಯಾಗಿ ಹರಿಯತೊಡಗಿದಳಂತೆ ಹೀಗಾಗಿ ಅವರೊಳಗೆ ಅವಿನಾಬಾವಿಯಾದ ಸಂಬಂದ ಸ್ಥಾಪಿತವಾಯಿತು

ಶ್ರೀಮನ್ನಾರಾಯಣ ಸ್ವರೂಪಿಯಾದ ಸಾಲಿಗ್ರಾಮದ ಪೂಜೆಗೆ ಮಂತ್ರೋಚ್ಚಾರಣ - ಘಂಟಾನಾದಗಳಷ್ಟೇ ಅವಶ್ಯಕವಾದ ಸಾಮಗ್ರಿ ತುಳಸಿ ಸಾಲಿಗ್ರಾಮಕ್ಕೆ ಅರ್ಘ್ಯ, ಪಾದ್ಯ, ಆಚಮನ, ಸ್ನಾನ, ನೈವೇದ್ಯ ಅಲಂಕರಣ -- ಇತ್ಯಾದಿ ಷೋಡಶೋಪಚಾರ ಪೂಜೆಗಳೆಲ್ಲ ತುಳಸೀದಳದ ಮುಖಾಂತರವೇ ನೆರವೇರಬೇಕು

ತುಳಸಿಯ ಅನುಪಮವಾದ ಮಹಿಮೆಯನ್ನು ಸಾಮಾನ್ಯ ಎಲ್ಲಾ ಪುರಾಣಗಳಲ್ಲೂ ವಿವರಿಸಿ ಹೇಳಲಾಗಿದೆ

ತುಲಸೀ ಕಾನನಂ ಚೈವ
ಗೃಹೇ ಯಸ್ಯಾವತಿಷ್ಠತೇ |
ತದ್ ಗೃಹಂ ತೀರ್ದಬೂತಂ ಹಿ
ನಾಯಾಂತಿ ಯಮ ಕಿಂಕರಾ ||

ತುಲಸೀ ಮಂಜರೀ ಬಿರ್ಯ
ಕುರ್ಯಾದ್ಧರಿಪರಾರ್ಚನಂ |
ನ ಸ ಗರ್ಬಗೃಹಂ ಯಾತಿ
ಮುಕ್ತಿ ಬಾಗೀ ಬವೇನ್ನರ ||

ಯಾವ ಗೃಹದಲ್ಲಿ ತುಳಸಿಯ ಗಿಡವಾಗಲಿ, ತುಳಸೀ ವನವಾಗಲಿ ಇರುತ್ತದಯೋ, ಆ ಮನೆಯು ತೀರ್ದಕ್ಷೇತ್ರದಂತ ಪಾವನವಾಗಿರುತ್ತದೆ ಯಮಕಿಂಕರರು ಅಲ್ಲಿಗೆ ಪ್ರವೇಶಿಸಲಾರರು ತುಲಸೀ ಮಂಜರಿಯಿಂದ ಹರಿಹರರ ಅರ್ಚನೆಯನ್ನು ಮಾಡುವ ಜನರು ಮತ್ತೆ ಜನ್ಮವನ್ನು ಪಡೆಯದ, ಮೋಕ್ಷಭಾಜನರಾಗುತ್ತಾರೆ



ಬ್ರಹ್ಮವೈವರ್ತ ಪುರಾಣದ ಪ್ರಕಾರ, ತುಳಸಿಯ ಬೇರಿನಿಂದ ಹಿಡಿದು ತುದಿಯವರೆಗೂ ವಿಶಿಷ್ಟ ತೀರ್ದಗಳೂ ದೇವಾನುದೇವತೆಗಳೂ ಆವಾಸಗೊಂಡಿರುತ್ತಾರೆ ನೀರಿಗೆ ಯಾವನು ತುಳಸಿ ಪತ್ರವೊಂದನ್ನು ಸೇರಿಸಿ ಸ್ನಾನ ಮಾಡುತ್ತಾನೋ ಅವನಿಗೆ ಲೋಕದ ಎಲ್ಲ ಪವಿತ್ರ ತೀರ್ದಗಳಲ್ಲಿ ಸ್ನಾತನಾದ ಪುಣ್ಯ ಲಬಿಸುತ್ತದೆ

ತುಲಸೀ ತರುಮೂಲೇ ಚ
ಪುಣ್ಯದೇಶೇ ಸುಪುಣ್ಯದೇ
ಅದಿಷ್ಠಾನಂ ತು ತೀರ್ದಾನಾಂ
ಸರ್ವೇಷಾಂ ಚ ಭವಿಷ್ಯತಿ ||
ತತ್ರೈವ ಸರ್ವದೇವಾನಾಂ
ಸಮದಿಷ್ಠಾನಮೇವ ಚ
ತುಲಸೀ ಪತ್ರ ಪತನಪ್ರಾಪ್ತೋ
ಯಶ್ಚ ವರಾನನೇ ||

ಒಂದು ಗಡಿಗೆಯ ತುಂಬ ನೀರು ತುಂಬಿ, ಅದಕ್ಕೆ ತುಳಸಿಯ ಎಸಳನ್ನು ಹಾಕಿ, ಆ ಜಲದಿಂದ




# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| ಭಾನು ಸೋಮ, ಮಂಗಳ ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5 00 ಪ್ರಾ 5 30 | ಪ್ರಾ ೫ ೦೦ ಪ್ರಾ 5 30 |
| ವಿಶ್ವರೂಪ ಸರ್ವದರ್ಶನ | ಪ್ರಾ 5 30 ಪ್ರಾ 6 00 | ಪ್ರಾ ೫ ೩೦ ಪ್ರಾ 6 00 |
| ತೋಮಾಲ ಕೊಲುವು ಪಂಚಾಂಗಶ್ರವಣ | ಪ್ರಾ 6 00 ಪ್ರಾ 6 30 | ಪ್ರಾ 6 00 ಪ್ರಾ 6 30 |
| ಸಹಸ್ರನಾಮಾರ್ಚನೆ | ಪ್ರಾ 6 30 ಪ್ರಾ 7 00 | ಪ್ರಾ 6 30 ಪ್ರಾ 7 00 |
| ಮೊದಲನೇ ಗಂಟೆ | ಪ್ರಾ 7 00 ಪ್ರಾ 7 30 | ಪ್ರಾ 7 00 ಪ್ರಾ 7 30 |
| ಸರ್ವದರ್ಶನ | ಪ್ರಾ 7 30 ಪ್ರಾ 10 00 | *ಅಭಿಷೇಕ ಪ್ರಾ 7 30 ಪ್ರಾ 8 30<br>ಸಮರ್ಪಣ ಪ್ರಾ 8 30 ಪ್ರಾ 9 30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10 00 ಪ್ರಾ 10 30 | ಪ್ರಾ 9 30 ಪ್ರಾ 10 30 |
| * ಆರ್ಜಿತ | ಕಲ್ಯಾಣೋತ್ಸವ ಪ್ರಾ 10 30 ಮ 12 00 | |
| ಸರ್ವದರ್ಶನ | ಪ್ರಾ 10 30 ಸಂ 6 30 | ಪ್ರಾ 10 30 ಸಂ 6 30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6 30 ರಾ 7 00 | ಸಂ 6 30 ರಾ 7 00 |
| ಸರ್ವದರ್ಶನ | ರಾ 7 00 ರಾ 8 45 | ರಾ 7 00 ರಾ 8 45 |
| ಏಕಾಂತ ಸೇವೆ | ರಾ 8 45 ರಾ 9 00 | ರಾ 8 45 ರಾ 9 00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200 00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ | ರೂ 100 00 |
| ಅರ್ಚನೆ (ಒಂದು ವರ್ಷಕ್ಕೆ) | ರೂ 42 00 |
| ಶಾಶ್ವತ ನಿತ್ಯಾರ್ಚನೆ | ರೂ 542 00 |

ಸಾಲಿಗ್ರಾಮ ಶಿಲಗೆ ಅಬಿಶೇಕ ಮಾಡಿ ಪೂಜಿಸಿದರ ಪರಮಾತ್ಮನಿಗೆ ಆಗುವ ತೃಪ್ತಿ ಸಂತೃಪ್ತಿಗಳು ಅಮೃತಪೂರ್ಣವಾದ ಸಹಸ್ರ ಗಡಿಗಗಳ ಅಬಿಷೇಕದಿಂದಲೂ ಆಗಲು ಸಾಧ್ಯವಿಲ್ಲವಂತೆ

ಸ ಸ್ನಾತ ಸರ್ವತೀರ್ಥೇಷು
ಸರ್ವಯಜ್ಞೇಷು ದೀಕ್ಷಿತ
ತುಲಸೀಪತ್ರ ತೋಯೇನ
ಯೋs ಬಿಷೇಕಂ ಸಮಾಚರೇತ್ ||
ಸುದಾಪಟ ಸಹಸ್ರೇಣ ಸಾ
ತುಷ್ಟಿರ್ನ ಬವೇದ್ಧರೇ
ಯಾ ಚ ತುಷ್ಟಿರ್ಭವೇನ್ನೃಣಾಂ
ತುಲಸೀ ಪತ್ರದಾನತ ||

ತುಳಸೀ ಗಿಡದ ಬಳಿ ಕುಳಿತು ನಡೆಸುವ ಜಪ - ತಪಾನುಷ್ಠಾನಗಳೂ, ರಾಮಾಯಣ - ಗೀತ ಭಾಗವತ ಪಠನಗಳೂ ವಿಶೇಷ ಫಲದಾಯಕವಾದವುಗಳೆಂದು ಹೇಳಲಾಗಿದೆ ತುಳಸಿಯು ಬೆಳೆದಿರುವ ಮಣ್ಣೂ ಕೂಡ ಅಂದ ಮಾಹಾತ್ಮ್ಯವುಳ್ಳದ್ದು ಅದೇ ರೀತಿ ಕೊರಳಲ್ಲಿ ಧರಿಸಿರುವ ತುಳಸೀ ಮಾಲೆಯು ಪುಣ್ಯಪ್ರದವೂ, ಮೃತ್ಯುಬಯನಾಶಕವೂ ಆಗಿದೆ

ಮ ನು ಷ್ಯ ನಿ ಗೆ ಸಾವು ಸಮಿಪವಾದಾಗ ತುಳಸೀ ದಳದಲ್ಲಿ ಗಂಗಾ ಜಲವನ್ನು ಅವನ ಬಾಯಿಗೆ ಬಿಡುವ ಪರಿಪಾಠವಿದೆ ಇದರಿಂದಾಗಿ, ಕಾಲನ ಸೇವಕರು ಬಂದು ತಲುಪುವ ಮೊದಲೇ, ವಿಷ್ಣುದೂತರು ಬಂದು ಆ ಜೀವಕ್ಕೆ ವಿಷ್ಣು ಸಾಯುಜ್ಯವನ್ನೂದಗಿಸುವರಂತ ಪದ್ಮಪುರಾಣದಲ್ಲಿ, ಶಿವನು ನಾರದನೂಡನ ತುಲಸೀಕಾಷ್ಠದಿಂದ ದಹನ ಸಂಸ್ಕಾರ ನೆರವೇರಿಸಿದರ ಶ್ರೇಯಸ್ಸಾಗುತ್ತದೆಯೆಂದು ಹೇಳುತ್ತಾನೆ

ಯದ್ಯೇಕಂ ತುಲಸೀಕಾಷ್ಠಂ
ಮದ್ಯೇ ಕಾಷ್ಠಶತಸ್ಯ ಹಿ
ದಾಹಕಾಲೇ ಬವೇನ್ಮುಕ್ತಿ
ಕೋಟಿಪಾಪಯುತಸ್ಯ ಚ ||

ದಹನದ ಕಾಲಕ್ಕ, ನೂರುಕಾಷ್ಠಗಳ ನಡುವೆ ಒಂದೇ ಒಂದು ತುಲಸೀಕಾಷ್ಠವಿದ್ದರೂ ಕೂಡಾ, ಕೋಟಿಪಾಪಯುತನಾದವನೂ ಮುಕ್ತಿಯನ್ನು ಪಡೆಯುತ್ತಾನ

ಆದ್ಯಾತ್ಮಿಕ - ಸಾಂಸ್ಕೃತಿಕ ಮತ್ತು ದಾರ್ಮಿಕ ದೃಷ್ಟಿಯಿಂದ ಇಷ್ಟು ಪ್ರಸಿದ್ಧವಾಗಿರುವ ತುಳ

ಸಿಯು ವೃನಂದಿನ ಜೀವನದಲ್ಲೂ ಹಾಸುಹೊಕ್ಕಾದ ಸಂಬಂಧವನ್ನು ಪಡೆದುಕೊಂಡಿದೆ ತೀರಾ ಸಾಮಾನ್ಯವಾದ ರೋಗಗಳು - ನೋವುಗಳಿಂದ ಹಿಡಿದು ಬಯಂಕರ ವ್ಯಾದಿಗಳ ಚಿಕಿತ್ಸೆಯಲ್ಲೂ ತುಳಸಿ ಉಪಯುಕ್ತ ಔಷದೀಯ ಸಸ್ಯವೆನಿಸಿದ ಅದರ ಎಲ, ಮಂಜರಿ, ಕಾಂಡ ಒಗೆ ಒಂದೊಂದು ಬಾಗವೂ ಒಂದಲ್ಲ ಒಂದು ರೋಗಕ್ಕೆ ರಾಮಬಾಣವಾಗಿ ಕಾರ್ಯವಸಗುತ್ತವೆ

ಒಮ್ಮೆ ಪೂಜಗೆ ಉಪಯೋಗಿಸಲ್ಪಟ್ಟ ತುಳಸಿ ಮತ್ತ ಬಳಕೆಗೆ ಅನರ್ಹವಾಗುವುದಿಲ್ಲ ಎಷ್ಟು ಬಾರಿ ಬಳಸಲ್ಪಟ್ಟರೂ ತನ್ನ ಶುದ್ದತೆಯನ್ನೂ, ಪಾವಿತ್ರ್ಯವನ್ನೂ, ಸಾದೀನ್ಯವನ್ನೂ ಅದು ಉಳಿಸಿಕೊಳ್ಳುತ್ತದ ಆದ್ದರಿಂದಲೇ ಅದು ಉಳಿದೆಲ್ಲ ಪುಷ್ಪಗಳಿಗಿಂತ ವಿಶಿಷ್ಟವಾದುದಾಗಿದ

ವರ್ಜ್ಯಂ ಪರ್ಯುಷಿತಂ ಪುಷ್ಪಂ<br>
ವರ್ಜ್ಯಂ ಪರ್ಯುಷಿತಂ ಜಲಂ |<br>
ನ ವರ್ಜ್ಯಂ ತುಲಸೀ ಪತ್ರಂ<br>
ನ ವರ್ಜ್ಯಂ ಜಾಹ್ನವೀಜಲಂ ||

"ಎಲ್ಲ ಪುಷ್ಪಗಳೂ, ಎಲ್ಲ ನೀರುಗಳೂ ಒಮ್ಮೆ ಉಪಯುಕ್ತವಾದರ ಮತ್ತ ವರ್ಜ್ಯವಾದವುಗಳು ಆದರೆ ತುಳಸಿಯ ಎಲೆಯೂ, ಗಂಗಾಜಲವೂ ಇದಕ್ಕೆ ಹೊರತಾದವುಗಳು" ಎಂದು ಸ್ಕಂದಪುರಾಣದಲ್ಲಿ ಸಾರಲಾಗಿದೆ

ಇಂದ ತುಳಸಿಯನ್ನು ಕೊಯ್ಯುವುದಕ್ಕೂ ಒಂದು ನಿಯಮದಿದೆ ರವಿವಾರ, ಅಮಾವಾಸ್ಯೆ ಸಂಕ್ರಾಂತಿ ಮತ್ತು ದ್ವಾದಶಿಯ ದಿನಗಳಂದು ತುಳಸಿ ಕೊಯ್ಯಬಾರದು ಅಂತೆಯೇ ಗ್ರಹಣಕಾಲದಲ್ಲಿ ಮತ್ತು ಮದ್ಯ ರಾತ್ರಿಯ ಬಳಿಕ ಮೂರು ತಾಸುಗಳವರೆಗೆ ತುಳಸಿ ಕೊಯ್ಯುವಿಕೆ ನಿಷಿದ್ಧ

ತುಳಸಿಯನ್ನು ಕೊಯ್ಯುವವನೂ ಅಷ್ಟೆ ದೇವ ಕಾರ್ಯಕ್ಕಾಗಲಿ, ಪಿತೃಕಾರ್ಯಕ್ಕಾಗಲಿ ತುಳಸಿ ನಿಡಿಸುವಾಗ ಸಾನ ಮಾಡಿ ಶುಚಿರ್ಭೂತನಾಗಿರಬೇಕು

ಅಸ್ನಾತ್ವಾ ತುಲಸೀಂ ಚಿತ್ವಾ<br>
ಯಃ ಪೂಜಾಂ ಕುರುತೇ ನರ<br>
ಸೋಽಪರಾದೀ ಬವೇತ್ ಸತ್ಯಂ<br>
ತತ್ಸರ್ವಂ ನಿಷ್ಫಲಂ ಭವೇತ್ ||

ಸ್ನಾನವನ್ನು ಮಾಡದೆ ತುಳಸಿಯನ್ನು ಕೊಯ್ದು ಪೂಜಯನ್ನು ಮಾಡಿದವನು ಅಪರಾದಿಯಾಗುತ್ತಾನ ನಿಜವಾಗಿಯೂ ಅವನ ಪೂಜಯೆಲ್ಲವೂ ನಿಷ್ಫಲವಾಗಿ ಬಿಡುತ್ತದೆ

ತುಳಸಿಯನ್ನು ಕೊಯ್ಯುವ ಮೊದಲು ತಿಕಯನ್ನು ಸ್ತುತಿಸುವ ಪರಿ ಇದು

ತುಲಸ್ಯಮೃತ ಜನ್ಮಾಸಿ<br>
ಸದಾತ್ವಂ ಕೇಶವಪ್ರಿಯೇ<br>
ಕೇಶವಾರ್ಥಂ ಚಿನೋಮಿ<br>
ತ್ವಾಂ ವರದಾ ಬವ ಶೋಬನ ||<br>
ತ್ವದಂಗಸಂಬವೈರ್ನಿತ್ಯಂ<br>
ಪೂಜಯಾಮಿ ಯದಾ ಹರಿಂ<br>
ತದಾ ಕುರು ಪವಿತ್ರಾಂಗಿ<br>
ಕಲೌ ಮಲವಿನಾಶಿನಿ ||

ಎಲೈ ತುಳಸಿಯೇ, ನೀನು ಅಮೃತದಿಂದ ಹುಟ್ಟಿ ಬಂದವಳು ಸದಾ ಕೇಶವಪ್ರಿಯಯಾದ ನಿನ್ನನ್ನು ಆ ಕೇಶವನ ಪೂಜೆಗಾಗಿಯೇ ಕೊಯ್ಯುತ್ತಿರುವ ಆದ್ದರಿಂದ ನನಗ ವರದಾಯಿನಿಯಾಗು ನಿನ್ನ ಸಿರಿಯಂಗಗಳಿಂದ ಉತ್ಪನ್ನವಾದ ವಸ್ತುಗಳಿಂದ ನಿತ್ಯವೂ ನಾನು ಹರಿಯನ್ನು ಪೂಜಿಸುವಂತೆ ಮಾಡು ಹೇ ಪವಿತ್ರಾಂಗಿಯಾದ ತುಳಸಿಯೇ, ನೀನು ಸಮಸ್ತ ಕಶ್ಮಲವಿನಾಶಿನಿಯಾಗಿರುವೆ"

ಇಂದಿಗೂ ತುಳಸಿಯ ವಿಶೇಷ ಪೂಜೆಗಳು ಕಾರ್ತೀಕ ಮಾಸದಲ್ಲಿ ನಡೆಯುತ್ತವ ಶುಕ್ಲಪಕ್ಷದ ದ್ವಾದಶಿಯಿಂದ ಮೊದಲ್ಗೊಂಡು ಹುಣ್ಣಿಮೆಯ ತನಕ, ಸಾಲಿಗ್ರಾಮದ ಜತ ತುಳಸಿಯ ವಿವಾಹೋತ್ಸವವನ್ನು ಆಚರಿಸಲಾಗುತ್ತದೆ ವಿಷ್ಣು ಸ್ತೋತ್ರ, ತುಲಸೀಕವಚ ಪಠನಗಳೂ ನಡೆಯುತ್ತವೆ ಶ್ರದ್ಧಾಳುಗಳು ಉಪವಾಸವ್ರತವನ್ನೂ ಕೈಗೊಳ್ಳುತ್ತಾರೆ

ಅವ್ಯಾಜವಾದ ಭಕ್ತಿಯಿಂದ ತುಳಸಿಯನ್ನು ಸ್ತುತಿಸುವಾಗ 'ತುಲಸೀ ನಾಮಾಷ್ಟಕ' ವನ್ನು ಹೇಳುತ್ತಾರೆ

ವೃಂದಾ ವೃಂದಾವನೀ<br>
ವಿಶ್ವಪೂಜಿತಾ ವಿಶ್ವಪಾವನೀ<br>
ಪುಷ್ಪಸಾರಾ ನಂದಿನೀ ಚ<br>
ತುಲಸೀ ಕೃಷ್ಣ ಜೀವನೀ |<br>
ಏತನ್ನಾಮಾಷ್ಟಕಂ ಚೈವ<br>
ಸ್ತೋತ್ರಂ ನಾಮಾರ್ಥ ಸಂಯುತಂ<br>
ಯಃ ಪಠೇತ್ತಾಂ ಚ ಸಂಪೂಜ್ಯ<br>
ಸೋಽಶ್ವಮೇದ ಫಲಂ ಲಭತ್ ||

ವೃಂದಾ, ವೃಂದಾವನೀ, ವಿಶ್ವಪೂಜಿತಾ, ವಿಶ್ವಪಾವನಿ, ಪುಷ್ಪಸಾರಾ, ನಂದಿನಿ , ತುಲಸಿ, ಕೃಷ್ಣಜೀವನಿ - ಇವು ತುಲಸಿಯ ಎಂಟು ವಿವಿದ ಹೆಸರುಗಳು ತುಲಸೀ ಪೂಜೆಯ ಬಳಿಕ ಅರ್ಥವತ್ತಾದ ಈ ಶ್ಲೋಕ ಪಠಿಸಿದರ ಅಶ್ವಮೇದದ ಫಲ ದೊರಯುತ್ತದ

ಇಂದ ಪವಿತ್ರವಾದ, ಮಹಿಮಾನ್ವಿತವಾದ ತುಳಸಿ ಪ್ರಾತರ್ವಂದ್ಯವಾಗಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ ನಿಜವಾಗಿಯೂ ತುಲಸಿ, "ತುಲನ ಇಲ್ಲದ ಸಸಿ"

ಯಾ ದೃಷ್ಟಾ ನಿಖಿಲಾಘಸಂಘಶಮನೀ<br>
ಸ್ಪೃಷ್ಟಾ ವಪುಷ್ಪಾವನೀ<br>
ರೋಗಾಣಾಮಬಿವಂದಿತಾ ನಿರಸನೀ<br>
ಸಿಕ್ತಾಂತಕತ್ರಾಸಿನೀ |<br>
ಪ್ರತ್ಯಾಸತ್ತಿವಿದಾಯಿನೀ ಬಗವತ<br>
ಕೃಷ್ಣಸ್ಯ ಸಂರೋಪಿತಾ<br>
ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ<br>
ತಸ್ಯೈ ತುಲಸ್ಯೈ ನಮ ||

ದರ್ಶನ ಪಥದಲ್ಲಿ ಬಂದರೆ ಅಖಿಲ ಪಾಪ ನಾಶಗೈವ, ಸ್ಪರ್ಶಮಾತ್ರದಿಂದ ಶರೀರ ಪಾವನಗೊಳಿಸುವ, ವಂದಿಸಿದರೆ ರೋಗ ನಿವಾರಣೆಗೈವ, ಜಲಸಿಂಚಿತಗೊಳಿಸಿದರೆ ಯಮನನ್ನೇ ಹೆದರಿಸುವ, ಆರೋಹಿಸಿಕೊಂಡರೆ ಶ್ರೀಕೃಷ್ಣನ ಬಳಿಗ ಹೊತ್ತೊಯ್ಯುವ, ಬಗವಂತನ ಚರಣಾರ್ಪಣಗೈದರೆ ಮೋಕ್ಷವೊದಗಿಸುವ ದೇವಿ ತುಲಸಿಗೆ ವಂದನೆ (ಸಾದಾರ) *





ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ 3 ಲಕ್ಷ ಇದರಲ್ಲಿ ಶುಕ್ರವಾರದ ಅಬಿಷೇಕವೂ ಸೇರುವುದು
* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು
* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು
* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ವೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ
* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು
* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದು ಬಾರಿಗೆ 10 ಶತಾಂಶ) ನಂತೆ, ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು) ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ**

ತಿ ತಿ ದೇ ತಿರುಪತಿ

# ನಾಲಾಯಿರ ದಿವ್ಯ ಪ್ರಬಂಧ

ಪ್ರೊ|| ಹಾರೋಹಳ್ಳಿ ವೆಂಕಟಸ್ವಾಮಿ

ತಮಿಳುನಾಡಿನಲ್ಲಿ ಜನಿಸಿ ಶ್ರೀವೈಷ್ಣವಧರ್ಮ ಮತ್ತು ತತ್ವಗಳನ್ನು ಪ್ರಚಾರಮಾಡಿ, ಜನರಲ್ಲಿ ಭಕ್ತಿ ಶ್ರದ್ಧೆಗಳನ್ನು ಮೂಡಿಸಿದ ಮಹಾತ್ಮರುಗಳಲ್ಲಿ ಆಳ್ವಾರ್‌ಗಳು ಪ್ರಾತ ಸ್ಮರಣೀಯರು ಮತ್ತು ಪ್ರದಮ ವರ್ಗದ ವಿಷ್ಣುಭಕ್ತರು ಇವರು ಭಕ್ತಿ ಪಾರ ಮ್ಯತೆಯಿಂದ ಹಾಡಿದ ಹಾಡುಗಳೇ ದಿವ್ಯಪ್ರಬಂಧ ಗಳು ಆಳ್ವಾರ್‌ಗಳು ಒಟ್ಟು ಹನ್ನೆರಡು ಮಂದಿ "ಆಳ್ವಾರ್" ಎಂಬ ತಮಿಳು ಪದಕ್ಕೆ "ಭಕ್ತಿಯಂಬ ಸಾಗರದಾಳದಲ್ಲಿ ಮುಳುಗಿದ ಮಹನೀಯರು" ಎಂದು ಅರ್ಥ ಆ ರೀತಿ ಭಕ್ತಿ ಎಂಬ ಮಹಾಸಾ ಗರದ ಆಳವನ್ನು ಹೊಕ್ಕು ಭಗವಂತನನ್ನು ಅನು ಭವಿಸಿ, ಭಾವ ಪರವಶರಾಗಿ ಪಡದ ಅನುಭವಿ ಸಿದ ಆನಂದವನ್ನು ಅನ್ಯರಿಗೆ ಅದರ ಸವಿಯನ್ನು ಣ್ಣಿಸಲು, ಆ ಮಹಾಮಹಿಮರ ಬಾಯಿಂದ ತಾನೇ ತಾನಾಗಿ ಶಬ್ದ ತಳೆದು ಹೊರ ಹೊರಟ ಸಾಹಿ ತ್ಯವೇ ತಮಿಳು ವೇದ (ದ್ರಾವಿಡವೇದ) ಗಳೆಂದು ಖ್ಯಾತಿವತ್ತ ನಾಲಾಯಿರ ದಿವ್ಯಪ್ರಬಂದಗಳು

ಈ ನಾಲ್ಕು ಸಾವಿರ ಹಾಡುಗಳನ್ನು ಒಬ್ಬರೇ ಹಾಡಲಿಲ್ಲ ಹನ್ನೆರಡು ಜನ ಮಹಾಭಕ್ತರು ವಿವಿದ ಕಾಲಗಳಲ್ಲಿ ದ್ರಾವಿಡ ದೇಶದ ವಿವಿದೆಡೆಗಳಲ್ಲಿ ಅವತರಿಸಿ, ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು, ಹಾಡಿಹೊಗಳಿ ಆನಂದಿಸಿದರು ಕಾಲಾಂತರದಲ್ಲಿ ಅವು ಖಿಲವಾದವು. ಈ ಮಹಾತ್ಮರು ಹಾಡಿ ದವುಗಳನ್ನು ಅವರಾಗಲೀ ಮತ್ತಾರೇ ಆ ಕಾಲ ದಲ್ಲಿ ಜೀವಿಸಿದ್ದವರು ಎಲ್ಲೂ ನಾಲ್ಕು ಸಾವಿರಪ್ರ ಬಂದಗಳನ್ನೂ ಬರೆದಿಡಲಿಲ್ಲ ಮತ್ತು ಬರೆದಿಡಲು ಸಾದ್ಯ ಎಂಬುದನ್ನು ಊಹಿಸಲೂ ಆಗುವುದಿಲ್ಲ ಕೆಲವರು ಕೆಲವು ಪ್ರಬಂದಗಳನ್ನು ಇಲ್ಲವೇ ಕೆಲವು ಪಾಶುರಗಳನ್ನು ಪಡೆದುಕೊಂಡಿದ್ದರೂ ಅವು ಅದ ರುಗಳ ಜತೆಯಲ್ಲಿಯೇ ಗತಿಸಿದವು. ಹಳೆಯ ಳಿಕಗಳಂತೆ ಅಲ್ಲೊಂದು ಇಲ್ಲೊಂದು ಪ್ರಬಂದ ಗಳು ಕೇಳಸಿಗುತ್ತಿದ್ದವು ಅಷ್ಟೇ. ಅಂತಹ ಕಾಲ ದಲ್ಲಿ ಶ್ರೀವೈಷ್ಣವ ಆಚಾರ್ಯ ಪರಂಪರೆಯಲ್ಲಿ ಪ್ರದಮರಾದ ಶ್ರೀಮನ್ನಾದಮುನಿ ಆಚಾರ್ಯರು ಅವತರಿಸಿದರು ಅವರು ತಿರುವಾಯ್ಮೊಳಿಯ



"ಆರಾವ ಮುದೇ" ಎಂಬ ದಶಕದಲ್ಲಿನ ಪಾಶು ರಗಳನ್ನು ಕೇಳಿದೊಡನೆ, ಅದರ ಭಕ್ತಿಸಾಹಿತ್ಯದ ಸವಿಯನ್ನುಂಡು ಅದನ್ನು ರಚಿಸಿದ ನಮ್ಮಾಳ್ವಾ ರರ ತಿರುವಾಯ್ಮೊಳಿಯ ಎಲ್ಲ ಒಂದು ಸಾವಿರ ಹಾಡುಗಳನ್ನು ಕಲಿತುಕೊಳ್ಳಲೋಸುಗ ಅನ್ವೇಷ ಣೆಯಲ್ಲಿ ನಿರತರಾಗಿ, ನಮ್ಮಾಳ್ವಾರರ ಜನ್ಮಭೂ ಮಿಯಾದ ಕುರಿಕಾಪುರಿ ಅದವಾ ಕುರುಗೂರ್ ನಲ್ಲಿಯೂ ದೊರೆಯದಿದ್ದಾಗ ಅವರು ನಿರಾಶ ರಾಗಲಿಲ್ಲ ಈ ನಾದಮುನಿಗಳು ತಿರುವಾ ಯ್ಮೊಳಿಯ ಪೂರ್ಣ ಪಾಠವನ್ನು ಪಡೆಯಲೇದೇ ಕೆಂಬ ಏಕೋದ್ದೇಶದಿಂದ ಇದೇ ಕುರಿಕಾಪುರಿ (ಆಳ್ವಾರ್ ತಿರುನಗರಿ) ಯಲ್ಲಿನ ಅರ್ಚಾಮೂ ರ್ತಿಯಾಗಿ ನೆಲೆಸಿರುವ ನಮ್ಮಾಳ್ವಾರರ ಸನ್ನಿದಿ

ಯಲ್ಲಿ ಅಂದು ಅಲ್ಲಿದ್ದ ನಮ್ಮಾಳ್ವಾರರ ಶಿಷ್ಯಪ್ರಶಿ ಷ್ಯರಾದ ಪರಾಂಕುಶ ದಾಸರಿಂದ, ಮದುರ ಕವಿ ಗಳ ಏಕೈಕ ದಿವ್ಯಪ್ರಬಂದವಾದ, "ಕಣ್ಣಿನುಣ್ ಶಿರುತ್ತಾಂಬು" ಅನ್ನು ವಿದ್ಯುಕ್ತವಾಗಿ ಉಪದೇಶಿ ಸಲ್ಪಟ್ಟವರಾಗಿ, ಏಕಾಸನಗ್ರಸ್ತರಾಗಿ, ಏಕಾಗ್ರಚಿತ್ತ ದಿಂದ, ನಮ್ಮಾಳ್ವಾರರ ಚರಣಾಬ್ಜಗಳನ್ನೇ ಸ್ಮರಿ ಸುತ್ತಾ, ಈ ಕಣ್ಣಿನುಣ್ ಶಿರುತ್ತಾಂಬು ಪ್ರಬಂದ ವನ್ನು ಹನ್ನೆರಡುಸಾವಿರ ಬಾರಿ ಪಠಿಸುವುದರಲ್ಲಿ ನಾದಮುನಿಗಳ ತಪಸ್ಸಿಗೆ ಆಳ್ವಾರರು ಪ್ರಸನ್ನರಾ ದರು ಆಗ ನಮ್ಮಾಳ್ವಾರರು ಪ್ರತ್ಯಕ್ಷರಾಗಿ ಅವರ ರಚಿಸಿದ ಮತ್ತು ಹಾಡಿದ ಮತ್ತು ನಾದಮುನಿ ಗಳು ಬಯಸಿದ ತಿರುವಾಯ್ಮೊಳಿ ಯೊಂದನ್ನೇ ಅಲ್ಲದೆ ತಮ್ಮೊಡನೆ ಉಳಿದ ಆಳ್ವಾರರುಗಳೂ ಹಾಡಿ ಖಿಲವಾಗಿದ್ದ ಎಲ್ಲವೂ ಸೇರಿ ಒಟ್ಟು ನಾಲ್ಕು ಸಾವಿರ ಪ್ರಬಂದಗಳೂ ಇವರ ಸ್ಮೃತಿ ಪಟಲ ದಲ್ಲಿ ಬರುವಂತೆ ಆಶೀರ್ವದಿಸಿದರು ವೇದವ್ಯಾ ಸರು ಹೇಗೆ ತಮ್ಮ ಸ್ಮೃತಿ ಪಟಲದಲ್ಲಿ ಮಹಾಭಾ ರತವನ್ನು ಪಡೆದಿದ್ದರೋ, ಅಂತೆಯೇ ನಾದಮು ನಿಗಳು ಈ ನಾಲಾಯಿರ ದಿವ್ಯ ಪ್ರಬಂದಗಳನ್ನು ಪಡೆದರು ನಾದಮುನಿಗಳು ತಮ್ಮ ಅಂತ ಶ್ಚಕ್ಷು ವಿಗೆ ಅರಿವಾದುದನ್ನು ಇವರ ಬರಹದ ಮೂಲಕ ತಾಳಪತ್ರಗಳಲ್ಲಿಳಿಸಿ ಶಾಶ್ವತಗೊಳಿಸಿ ಜೀರ್ಣೋ ದ್ಧಾರ ಮಾಡಿದರು ಈ ಮಹತ್ಕಾರ್ಯದಿಂದ ನಮಗೆ ಲಭ್ಯವಾಗಿರುವವು ದ್ರಾವಿಡವೇದಗಳೆನಿಸಿ ರುವ ದಿವ್ಯಪ್ರಬಂದಗಳು ಪರಿಪೂರ್ಣ ವಿದ್ವಾ ವಂತರೂ, ವೇದಕೋವಿದರೂ, ವಿದ್ಯಾಪಾರಂಗ ತರೂ ಆದ ನಾದಮುನಿಗಳು, ತಮಗೆ ದೊರೆದ ಈ ನಿದಿಯನ್ನು ವರ್ಗೀಕರಿಸಿ, ಕ್ರಮವಾದ ರೀತಿ ಯಲ್ಲಿ ಬರೆದರು ನಮ್ಮಾಳ್ವಾರರು ರಚಿಸಿದ "ತಿರು ವಿರುತ್ತಂ, ತಿರುವಾಶಿರಿಯಂ, ಪೆರಿಯ ತಿರುವಂ ದಾದಿ, ಮತ್ತು ತಿರುವಾಯ್ಮೊಳಿ" ಎಂಬ ನಾಲ್ಕು ದಿವ್ಯ ಪ್ರಬಂದಗಳು ಕ್ರಮವಾಗಿ ಸಂಸ್ಕೃತದ ನಾಲ್ಕು ವೇದಗಳಾದ, ಋಗ್ವೇದ, ಯಜುರ್ವೇದ, ಅದರ್ವ ವೇದ ಮತ್ತು ಸಾಮವೇದಗಳಲ್ಲಿನ ರಹಸ್ಯ ತತ್ವ ಗಳೆಲ್ಲವನ್ನೂ ಅಡಕವಾಗಿಸಿಕೊಂಡಿರುವುದರಿಂದ ತಮಿಳು ಭಾಷೆಯ ಈ ಪ್ರಬಂಧಗಳು "ದ್ರಾವಿಡಾ

ಮ್ನಾಯಿ ಅದವಾ ದ್ರಾವಿಡ ವೇದಗಳು" ಎಂದೇ ಕರೆಯಲ್ಪಟ್ಟಿವೆ

ವೇದಗಳಿಗ ಉಪನಿಷತ್ತುಗಳು ಪೂರಕ ಮತ್ತು ಅವುಗಳೇ ಸರ್ವಸಾಮಾನ್ಯರಿಗೆ ಸತ್ತ್ವವನ್ನು ಸರಳವಾಗಿ ಸಮಂಜಸವಾಗಿ ತಿಳಿಸುವ ಸಾದನ ಮಾದ್ಯಮ ವಾಗಿವೆಯಷ್ಟೆ. ಅದರಂತೆಯೇ ನಮ್ಮಾಳ್ವಾರರ ನಾಲ್ಕು ಪ್ರಬಂದಗಳು ದ್ರಾವಿಡವೇದ ಚತುಷ್ಟಯಗಳಾದರೆ ಇತರ ದಿವ್ಯಸೂರಿಕೃತ (ಉಳಿದ ಏಕಾದಶ ಆಳ್ವಾರರುಗಳ ಪ್ರಬಂದಗಳು) ಪ್ರಬಂದಗಳು ಉಪಾಂಗಗಳ ನೆಲೆಯನ್ನು ನೀಡಬಲ್ಲ ವೈಶಿಷ್ಟ್ಯವನ್ನು ಪಡೆದಿವೆ

ಪರಮ ಕರುಣಾಳುಗಳಾದ ಆಳ್ವಾರರುಗಳು ಕರುಣಿಸಿರುವ ಎಲ್ಲ ದಿವ್ಯ ಪ್ರಬಂದಗಳನ್ನೂ ನಾದಮುನಿ ಆಚಾರ್ಯರು ಕ್ರೋಡೀಕರಿಸಿ, ಇಪ್ಪತ್ತನಾಲ್ಕು ಪ್ರಬಂದಗಳಲ್ಲಿ ಜೀರ್ಣೋದ್ಧಾರ ಮಾಡಿದರು ಅವುಗಳನ್ನು ಈ ರೀತಿ ಪಟ್ಟಿಮಾಡಬಹುದು

| ಕ್ರಮ ಸಂಖೆ | ಆಳ್ವಾರರ ಹಸರು | ಅಂಶ | ಪ್ರಬಂದಗಳು | ಪಾಶುರಗಳು | ಒಟ್ಟು ಸಂಖ್ಯೆ |
|---|---|---|---|---|---|
| 1 | ಪೊಯ್‌ಹೈ ಆಳ್ವಾರ್ | ಪಾಂಚಜನ್ಯ(ಶಂಖ) | 1 ಮುದಲ್ ತಿರುವಂದಾದಿ | 100 | 100 |
| 2 | ಪೂದತ್ತಾಳ್ವಾರ್ | ಕೌಮೋದಿಕ (ಗದೆ) | 2 ಇರಂಡಾಂ ತಿರುವಂದಾದಿ | 100 | 100 |
| 3 | ಪೇಯಾಳ್ವಾರ್ | ನಂದಕ (ಕತ್ತಿ) | 3 ಮೂನ್ರಾತಿರುವಂದಾದಿ | 100 | 100 |
| 4 | ತಿರುಮಳಿಶೈ ಆಳ್ವಾರ್ | ಸುದರ್ಶನ (ಚಕ್ರ) | 4 ತಿರುಚ್ಚಂದ ವಿರುತ್ತಂ | 120 | |
| | | | 5 ನಾನ್ಮುಕನ್ ತಿರುವಂದಾದಿ | 96 | 216 |
| 5 | ನಮ್ಮಾಳ್ವಾರ್ | ಸೇನಾನಾದ | 6 ತಿರುವಿರುತ್ತಂ | 100 | |
| | (ಶಠಕೋಪರು) | (ವಿಶ್ವಕ್ಸೇನ) | 7 ತಿರುವಾಶಿರಿಯಂ | 07 | |
| | | | 8 ಪೆರಿಯ ತಿರುವಂದಾದಿ | 87 | |
| | | | 9 ತಿರುವಾಯ್ಮೊಳಿ | 102 | 297 |
| 6 | ಕುಲಶೇಖರಾಳ್ವಾರ್ | ಕೌಸ್ತುಭಾಂಶ | 10 ಪೆರುಮಾಳ್ ತಿರುಮೊಳಿ | 105 | 105 |
| 7 | ಪೆರಿಯಾಳ್ವಾರ್ | ಗರುಡಾಂಶ | 11 ತಿರುಪ್ಪಲ್ಲಾಂಡು | 12 | |
| | (ವಿಷ್ಣುಚಿತ್ತ) | | 12 ಪೆರಿಯಾಳ್ವಾರ್ ತಿರುಮೊಳಿ | 461 | 473 |
| 8 | ತೊಂಡರಡಿಪ್ಪೊಡಿ ಆಳ್ವಾರ್ | ವನಮಾಲಾಂಶ | 13 ತಿರುಪ್ಪಳ್ಳಿಯೆಳುಚ್ಚಿ | 10 | |
| | (ವಿಪ್ರನಾರಾಯಣರು) | | (ಶ್ರೀರಂಗ ಸುಪ್ರಬಾತ) | | |
| | | | 14 ತಿರುಮಾಲ್ಯ | 45 | 55 |
| 9 | ತಿರುಪ್ಪಾಣಿ ಆಳ್ವಾರ್ | ಶ್ರೀವತ್ಸಾಂಶ | 15 ಅಮಲನಾದಿ ಪಿರಾನ್ | 10 | 10 |
| 10 | ತಿರುಮಂಗೈ ಆಳ್ವಾರ್ | ಶಾಗರ್ಙ್ಗಾಂಶ | 16 ಪೆರಿಯ ತಿರುಮೊಳಿ | 1084 | |
| | | | 17 ತಿರುಕ್ಕುರುಂದಾಂಡಗಂ | 20 | |
| | | | 18 ತಿರುನೆಡುಂದಾಂಡಗಂ | 30 | |
| | | | 19 ತಿರುವೆಳಕ್ಕೂರ್ ತಿರುಕ್ಕೈ | 01 | |
| | | | 20 ಶಿರಿಯ ತಿರುಮಡಲ್ | $77\frac{1}{2}$ | |
| | | | 21 ಪೆರಿಯ ತಿರುಮಡಲ್ | $148\frac{1}{2}$ | 1361 |
| 11 | ಮದುರ ಕವಿ ಆಳ್ವಾರ್ | ಕುಮುದಾಂಶ (ಗಣಾಂಶ) | 22 ಕಣ್ಣಿನುಣ್ ಶಿರುತ್ತಾಂಬು | 11 | 11 |
| 12 | ಆಂಡಾಳ್ | ಬೂದೇವಿ ಅಂಶ | 23 ತಿರುಪ್ಪಾವೈ | 30 | |
| | (ಗೋದಾದೇವಿ) | | 24 ನಾಚ್ಚಿಯಾರ್ ತಿರುಮೊಳಿ | 143 | 173 |
| | | | ಒಟ್ಟು ಪಾಶುರಗಳ ಸಂಖ್ಯೆ | 4000 | 4000 |

# ದೇವತೆಗಳ ವಾಹನಗಳು

--ರಮಸುತ

ವೇದಪುರಾಣಗಳಲ್ಲಿ ದೇವತೆಗಳ ವಾಹನ ಗಳ ಬಗ್ಗೆ ವಿಶಿಷ್ಟ ವಿವರಗಳಿವೆ ಅವರು ಬೇರೆ ಬೇರೆಯಾದ ವಿಮಾನಗಳನ್ನಲ್ಲದೆ ವೃಷಬ, ಮಹಿಷ, ಮೂಷಿಕ, ಆನೆ, ಗರುಡ, ಕಾಗೆ ಇತ್ಯಾದಿ ಪಶುಪಕ್ಷಿಗಳನ್ನೂ ವಾಹನಗಳನ್ನಾಗಿ ಮಾಡಿಕೊಂಡಿದ್ದರು ಇಂದಿನ ಬುದ್ಧಿ ಜೀವಿಗಳಿಗೆ ಇದೊಂದು ಆಶ್ಚರ್ಯಕರ ವಿಷಯವಾಗಿದ್ದರೂ, ಪೌರಾಣಿಕ ಸಾಹಿತ್ಯಕ ದೃಷ್ಟಿಯಿಂದ ಇವೆಲ್ಲವೂ ಸತ್ಯವಾಗಿದ್ದುವು.

ಅಸುರರಿಂದ ಸಂತ್ರಸ್ತರಾದ ದೇವತೆಗಳು ಬ್ರಹ್ಮ ಲೋಕಕ್ಕೆ ಹೋಗಲು ಅಲ್ಲಿಂದ ಶಿವ ಲೋಕಕ್ಕೆ ಹೋಗಲು, ಆ ನಂತರ ಬ್ರಹ್ಮ - ಶಿವರ ಸಮೇತ ವಿಷ್ಣು ಲೋಕಕ್ಕೆ ಹೋಗಬೇಕಾದರೆ ಅವರು ವಿವಿದ ರೀತಿಯ ವಿಮಾನಗಳಲ್ಲಿ ಹೋಗುತ್ತಿದ್ದರು ಎಂಬುದು ಶತಸ್ಸಿದ್ಧ ಈ ವಿಮಾನಗಳು ಇಂದಿನ ಆದುನಿಕ ವಿಮಾನಗಳಿಗಿಂತಲೂ ತಾಂತ್ರಿಕ ವೈಶಿಷ್ಟ್ಯಪೂರ್ಣವಾದುವೂ, ಹೆಚ್ಚು ಶಕ್ತಿಶಾಲಿಯಾದುವೂ ಆಗಿದ್ದುವು. ಅವು ಮನೋವೇಗಕ್ಕಿಂತ ಹೆಚ್ಚು ವೇಗವಾಗಿ ಹೋಗುವಂತಹವೂ, ತೀವ್ರಗಾಮಿಗಳೂ ಆಗಿದ್ದುವು.

ಹರಿದ್ವಾರದಲ್ಲಿ ಸನಕಾದಿ ಮುನೀಶ್ವರರು ನಾರದರಿಗೆ ಶ್ರೀಮದ್ಭಾಗವತದ ಕದಾನಕವನ್ನು ವಿವರಿಸುತ್ತಿದ್ದರು ಆ ಸಮಯದಲ್ಲಿ ದೇವತೆಗಳು ಆಕಾಶದಲ್ಲಿನ ವಿಮಾನಗಳಲ್ಲಿ ಕುಳಿತುಕೊಂಡು ಪಾರಿಜಾತ, ಹರಿಚಂದನ ಇತ್ಯಾದಿ ಕಲ್ಪವೃಕ್ಷದ ಪುಷ್ಪಗಳನ್ನು ಸುರಿಸಿದರು

ವಿಮಾನಾನಿ ಸಮಾರುಹ್ಯ
ಕಿಯಂಕೋ ದೇವನಾಯಕಾ
ಕಲ್ಪವೃಕ್ಷ ಪ್ರಸೂನೈಸ್ತಾನ್
ಸರ್ವಾಂಸ್ತತ್ರ ಸಮಾಕಿರನ್ ||
(ಪದ್ಮಪುರಾಣ--ಉತ್ತರ ಖಂಡ)

ಮೇರು ಗಿರಿಯಲ್ಲಿ ಸ್ಕಂದ ಸರೋವರ ಒಂದು ಸುಂದರ ಪ್ರದೇಶ ಅದರ ತಟದ ಮೇಲೆ ಸಂತ ನೈಮಿಷರು ಶ್ರೀ ಸನತ್‌ಕುಮಾರರನ್ನು ಭೇಟಿ ಮಾಡಿದರು ಆಗ ಅವರು ಪಾಶಚ್ಛೇದನಾರ್ದ ಪ್ರಾರ್ದನೆ ಮಾಡಿದರು ಅದೇ ಸಮಯಕ್ಕೆ ಸರಿಯಾಗಿ ಸೂರ್ಯನಂತೆ ಪ್ರಕಾಶಮಾನವಾದ ಸುಂದರ ವಿಮಾನವೊಂದು ಕಂಡು ಬಂದಿತು ಅದನ್ನು ಅಸಂಖ್ಯಾಕರಾದ ಗಣೇಶ್ವರರು ನಾಲ್ದೆಸೆಗಳಿಂದಲೂ ಸುತ್ತುವರೆದಿದ್ದರು

ದದೃಶೆ ತತ್ಕ್ಷಣೆ ತಸ್ಮಿನ್
ವಿಮಾನಂ ಬಾನುಸನ್ನಿಬಮ್
ಗಣೇಶ್ವರೈರ ಸಂಖ್ಯೆಯೈ
ಸಂವೃತಂ ಚ ಸಮಂತತ ||

(ಶಿವಪುರಾಣ ವಾ ಸಂ, ಉ ಖಂ 41-22)

ಆ ವಿಮಾನದ ಮದ್ಯಬಾಗದಲ್ಲಿ ಎರಡು ಝೂಲರಿಗಳ ನಡುವೆ ಚಂದ್ರಮನ ಸಮಾನ ಉಜ್ವಲ, ಮಣಿಮಯ ದಂಡದಿಂದ ಕೂಡಿದ ಶುದ್ಧ ಛತ್ರದ ಕೆಳಗೆ ದಿವ್ಯ ಸಿಂಹಾಸನದ ಮೇಲೆ ಶಿಲಾದ ಪುತ್ರ ನಂದಿಯು ತನ್ನ ಪತ್ನಿ ಸುಯಶಾಳೊಂದಿಗೆ ಕುಳಿತಿದ್ದನು

ತಸ್ಯ ಮದ್ಯೇ ವಿಮಾನಸ್ಯ
ಚಾಮರದ್ವಿತಯಾಸ್ತರೇ
ಛತ್ರಸ್ಯ ಮಣಿದಂಡಸ್ಯ
ಚಂದ್ರಸ್ಯೇವ ಶುಚೇರದ
ದಿವ್ಯಂ ಸಿಂಹಾಸನಾರೂಢಂ
ದೇವ್ಯಾ ಸುಯಶಯಾ ಸಹ

(ಶಿವಪುರಾಣ ವಾ ಸಂ, ಉ ಕಾಂ 41/26--27)

ನಂದಿಯು ಶಂಕರನ ವಾಹನ ಎಂದು ಜನ ನಂಬುತ್ತಾರೆ ವ್ಯಾಸರು ಈತನನ್ನು ಸಾಕ್ಷಾತ್ ಶಿವ ರೂಪವೆಂದು ವರ್ಣಿಸಿದ್ದಾರೆ ಮುಂದು ವರೆದು 'ಆತನ ಕೈನಲ್ಲಿ ಸುಂದರ ತ್ರಿಶೂಲವಿತ್ತು, ಆತನಿಗೆ ನಾಲ್ಕು ಬುಜಗಳು ಇದ್ದವು, ಹಣೆಯ ಮೇಲೆ ಚಂದ್ರಾಕೃತಿಯು ಇದ್ದುದೇ ಅಲ್ಲದೆ ಆತನ ಕಂಠದಲ್ಲಿ ನಾಗನು ಸುಶೋಭಿತನಾಗಿದ್ದನು' ಎಂದು ತಿಳಿಸಿದ್ದಾರೆ

ಶಿಲಾದತನಯಂ ಸಾಕ್ಷಾತ್
ಶ್ರೀಮಚ್ಛೂಲವರಾಯುದಮ್

ಚತುರ್ಬಾಹು ಮುದಾರಾಂಗಂ
ಚಂದ್ರರೇಖಾ ವಿಭೂಷಿತಮ್
ಕಂಠೇ ನಾಗೇನ ಮೌಲೌ ಚ
ಶಶಾಂಕೇನಾಪ್ಯಲಂ ಕೃತಮ್
ಸವಿಗ್ರಹ ಮಿವೈಶ್ವರ್ಯ
ಸಾಮರ್ದ್ಯಮಿವ ಸತ್ತ್ರಿಯಮ್

(ಶಿವಪುರಾಣ ವಾ ಸಂ, ಉ ಖ ಶ್ಲೋಕ31-32)

ಆತನ ದರ್ಶನ ಮಾತ್ರದಿಂದಲೇ, ನೈಮಿಷೇಯ ಋಷಿಗಳ ಪಾಶಚ್ಛೇದನ (ಸಂಸಾರ ಬಂದನದಿಂದ ಮೋಕ್ಷಪ್ರಾಪ್ತಿ) ವಾಯಿತು

ಮೇಲಿನ ಸಂದರ್ಬಗಳಿಂದ ಪ್ರಮಾಣಿತಗೊಳ್ಳುವುದೇನೆಂದರೆ ನಂದೀಶ್ವರನು ಆಕೃತಿ ಮಾತ್ರದಿಂದಲೇ ವೃಷಭನಂತಿರಲಿಲ್ಲ, ಆತನು ಸಾಕ್ಷಾತ್ ಶಂಕರನಂತಿದ್ದನು ಆತನ ವಿಮಾನದಲ್ಲಿನ ಧ್ವಜದಲ್ಲಿ ವೃಷಭದ ಚಿಹ್ನೆ ಇತ್ತು

'ವೀರ ಗೋವೃಷ ಚಿಹ್ನೇ
ವಿದ್ರುಮದ್ರುಮಯಷ್ಟಿನಾ'

ದೇವತೆಗಳ ಪ್ರತಿಯೊಂದು ವಿಮಾನವೂ ಬೇರೆ ಬೇರೆಯೇ ಆದ ಸ್ವರೂಪವನ್ನು ಪಡೆದಿದ್ದವು. ವಿಮಾನವೊಂದರ ಅಗ್ರಭಾಗದಲ್ಲಿ ಮಹಿಷನ ತತಿಯ ಕೊಂಬುಗಳನ್ನು ಲಗತ್ತಿಸಲಾಗಿತ್ತು ಮತ್ತೊಂದು ವಿಮಾನದ ಅಗ್ರ ಭಾಗವು ಆನೆಯ ಮುಖವನ್ನು ಹೋಲುತ್ತಿದ್ದರೆ, ಮತ್ತೊಂದು ವಿಮಾನವು ಮಯೂರದಾಕಾರವನ್ನು ಹೊಂದಿತ್ತು

ಇದಲ್ಲದೆ ಪ್ರತಿಯೊಬ್ಬ ದೇವತೆಯೂ ದ್ರುತಗತಿಯಲ್ಲಿ ವಿಮಾನಗಳನ್ನು ನಡೆಸುತ್ತಿದ್ದನು ವಿಮಾನದ ಆಕಾರ, ಧ್ವಜ ಹಾಗೂ ಚಿಹ್ನೆಗಳು ಆಯಾ ದೇವತೆಯ ಪರಿಚಯವನ್ನು ಮಾಡುತ್ತಿದ್ದವು.

# ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸ ಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ ೯ ಗಂಟೆಯಿಂದ ಸಂಜೆ ೬ ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು

**ತಿ ತಿ ದೇ**

**************************

**ಅತಿಸುಲಭ ಬೆಲೆಯಲ್ಲಿ**

## ಭಕ್ತಿಗೀತೆಗಳ ಕ್ಯಾಸೆಟ್‌ಗಳ ಸಮರ್ಪಣೆ

ಕನ್ನಡ ಹರಿದಾಸರ ಅನ್ನಮಾಚಾರ್ಯರ ಅಪೂರ್ವ ಸಾಹಿತ್ಯಸೃಷ್ಟಿ
ಕಮನೀಯ ಗಾನಕಲಾಕೋವಿದರ ಸರಸ ಸಂಗೀತ ಸುಧಾವೃಷ್ಟಿ

ಕಲಿಯುಗ ಪ್ರತ್ಯಕ್ಷ ದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಕೊಂಡಾಡುತ್ತ
ಕರ್ನಾಟಕ ಹರಿದಾಸರು, ತಾಳ್ಳಪಾಕ ಅನ್ನಮಾಚಾರ್ಯರು ರಚಿಸಿದ
ಅಧ್ಯಾತ್ಮ ಸಂಕೀರ್ತನೆಗಳ ಸಂಪುಟ

## ಕನ್ನಡ

**ತಿರುಮಲೆಯ ಚೆಲುವ**
ಗಾಯನ ಶ್ರೀಮತಿ ವಾಣಿಜಯರಾಂ
ನಂ 3004 ಸಿ–60

**ಮೂರು ನಾಮಗಳ ಮೂರುತಿ**
ಗಾಯನ ಶ್ರೀಮತಿ ಸಿ ಸರೋಜ ಸಿ ಲಲಿತ
ನಂ 3005 ಸಿ–60

**ಶ್ರೀನಿವಾಸ ತತ್ತ್ವ**
ಗಾಯನ ಬೆಳ್ಳೂರು ಸೋದರಿಯರು
ನಂ 3006 ಸಿ–60

**ಭಳಿರೆ ತಿರುಮಲರಾಯ**
ಗಾಯನ ಶ್ರೀ ಆರ್ ಕೆ ಶ್ರೀಕಂಠನ್
ನಂ 3007 ಸಿ–60

**ಗೋವಿಂದ ಮಿರಾಯಿ**
ಗಾಯನ ಶ್ರೀಮತಿ ರತ್ನಮಾಲಾಪ್ರಕಾಶ್
ನಂ 3008 ಸಿ–60

**ಗೋವಿಂದ ಗಾನಾಮೃತ**
ಗಾಯನ ಸಂತ ಭದ್ರಗಿರಿ ಅಚ್ಯುತದಾಸಜೀ
ನಂ 3009 ಸಿ–60

## ತೆಲುಗು

**ಅನ್ನಮಯ್ಯ ಸಂಕೀರ್ತನಕೌಮುದಿ**
ಗಾಯನ ಶ್ರೀ ಡಿ ಪಶುಪತಿ
ನಂ 4005 ಸಿ–6

**ಅನ್ನಮಯ್ಯ ಪದಪಾರಿಜಾತಂ**
ಗಾಯನ ಶ್ರೀ ಡಿ ಪಶುಪತಿ
ನಂ 4006 ಸಿ–60

**ಕ್ಯಾಸೆಟ್‌ಗಳು ಎಲ್ಲ ತಿ ತಿ ದೇ ಸಮಾಚಾರ ಕೇಂದ್ರಗಳಲ್ಲೂ ದೊರೆಯುತ್ತವೆ**

ಕಾರ್ಯನಿರ್ವಹಣಾಧಿಕಾರಿ

ಭಗವತೀ ಜಗದಂಬೆಯನ್ನು ಸಿಂಹವಾಹಿನಿ ಎಂದೇ ಕರೆಯುವರು

ಆದರೆ ಆಕೆಯ ಬಳಿ ಮನೋವೇಗದಿಂದ ಚಲಿಸುವ ವಿಮಾನಗಳು ಇದ್ದುವೇ ಅಲ್ಲದೆ ಸಂಕಲ್ಪಮಾತ್ರದಿಂದ ಅವುಗಳಿಗೆ ಸಮಾನವಾದ ನೂರಾರು ವಿಮಾನಗಳನ್ನು ಪ್ರಕಟಗೊಳಿಸುವ ಸಾಮರ್ಥ್ಯವೂ ಆಕೆಯಲ್ಲಿತ್ತು

ಏಕಾರ್ಣವದಲ್ಲಿ ಬ್ರಹ್ಮ ವಿಷ್ಣು, ಮಹೇಶ್ವರರನ್ನು ಕುರಿತು ಬಗವತೀ ಜಗದಂಬೆಯು ಅವರು ತಮ್ಮ ತಮ್ಮ ಕಾರ್ಯಗಳನ್ನು ನೆರವೇರಿಸುವಂತೆ ಆದೇಶ ನೀಡುವಳು

ಕಾಜೇಶಾ ಸ್ವಾನಿ ಕಾರ್ಯಾಣಿ
ಕುರುಧ್ವಂ ಸಮತಂದ್ರಿತಾ
(ದೇವೀ ಭಾಗವತ 3--2--32)

ಆಗ ಆ ಮೂವರೂ ದೇವರುಗಳು ತಾವು ಶಕ್ತಿಹೀನರಾಗಿರುವುದಾಗಿಯೂ, ಅದರಿಂದ ತಮ್ಮ ಕಾರ್ಯವನ್ನು ನಿರ್ವಹಿಸುವುದರಲ್ಲಿ ಅವರು ಅಸಮರ್ಥರಾಗಿರುವುದಾಗಿಯೂ ತಿಳಿಸಿದರು

ಆಗ ಇದ್ದಕ್ಕಿದ್ದಂತೆ ಆಕಾಶದಲ್ಲಿ ಒಂದು ಸುಂದರ ವಿಮಾನ ಕಾಣಿಸಿತು ಅದನ್ನು ತೋರಿಸುತ್ತಾ ದೇವಿಯು ಮುಗುಳುನಗುತ್ತಾ ಹೇಳಿದಳು, "ನೀವು ಈ ವಿಮಾನದಲ್ಲಿ ಕುಳಿತುಕೊಳ್ಳಿ!"

ಯುಟಿತ್ಯೇವಾಗತಂ ತತ್ರ
ವಿಮಾನಂ ಗಗನಾಚ್ಛುಭಮ್
ಸೋವಾಚಾಸ್ಮಿನ್ ಸುರಾ ಕಾಮಂ
ವಿಶಧ್ವಂ ಗತಸಾಧ್ವಸಾ
(ದೇವೀ ಭಾಗವತ 3--2--37)

ಈ ವಿಮಾನವು ಅಮೂಲ್ಯ ರತ್ನಗಳಿಂದ ನಿರ್ಮಾಣವಾದುದಾಗಿತ್ತು ಅದರಲ್ಲಿ ಮುತ್ತಿನ ಜಾಲರಿಗಳಿದ್ದುವು. ಅದರಲ್ಲಿನ ಸಣ್ಣ ಗಂಟೆಗಳು ಇಂಪಾದ ದನಿಯನ್ನು ನೀಡುತ್ತಿದ್ದವು.

ದೇವಿಯು ತನ್ನ ಶಕ್ತಿಯಿಂದ ಅದನ್ನು ಆಕಾಶದಲ್ಲಿ ಹಾರಿಸಿದಳು

ಸಮಾರುಹ್ಯೋಪವಿಷ್ಟಾ ಸ್ತೇ
ವಿಮಾನೇ ರತ್ನ ಮಂಡಿತೆ
ಮುಕ್ತಾ ದಾಮ ಸುಸಂವೀತೇ
ಕಿಂಕಿಣೀಜಾಲ ಶಬ್ದಿತೆ

ಸ್ವಶಕ್ತ್ಯಾ ತದ್ವಿಮಾನಂ ವೈ
ನೋದಯಾಮಾಸ ಚಾಮ್ಬರೆ
(ದೇವೀ ಬಾಗವತ 3 -2--39,41 )

ಬೂಮಿ, ಬೂಪಾಲ, ಪ್ರಜೆಗಳು, ವನೋಪ ಯುಕ್ತ ಭೂಲೋಕವನ್ನು, ಇಂದ್ರಾದಿ ದೇವತೆಗಳ ಸಮೇತ ಸ್ವರ್ಗಲೋಕವನ್ನು, ಬ್ರಹ್ಮ ಸನಕಾದಿ ಹಾಗೂ ಮರೀಚ್ಯಾದಿ ಋಷಿಗಳಿಂದ ಕೂಡ ಬ್ರಹ್ಮ ಲೋಕವನ್ನು, ವಿಷ್ಣು ಹಾಗೂ ಅವರ ಪಾರ್ಷದರಿಂದ ಕೂಡಿದ ವಿಷ್ಣು ಲೋಕವನ್ನು ತ್ರಿಮೂರ್ತಿಗಳು ಆ ವಿಮಾನದಲ್ಲಿ ಕುಳಿತಿರುವಂತೆ ಆಶ್ಚರ್ಯ ಚಕ್ಷುಗಳಿಂದ ನೋಡಿದರು ಇದೇ ರೀತಿಯಲ್ಲಿ ಭಗವತೀ ಜಗದಂಬೆಯು ಆಸೀನಳಾದಂತಹ ವಿಮಾನವು ತಮ್ಮ ವಿಮಾನಕ್ಕಿಂತಲೂ ವೇಗವಾಗಿ ಮುಂದೆ ಹೋಗುತ್ತಿರುವುದನ್ನು ಅವರುಗಳು ನೋಡಿದರು

'ಅಸ್ಮಾಬಿ ಸಂಸ್ಥಿತಾ ದೃಷ್ಟ್ವಾ
ವಿಮಾನೋಪರಿ ಚಾಂಬಿಕಾ'

## ವಿಮಾನಗಳ ನಿರ್ಮಾಣ ವೈವಿಧ್ಯತೆ

ಪುರಾಣಗಳನ್ನು ಆಳವಾಗಿ ಅದ್ಯಯನ ಮಾಡಿದಲ್ಲಿ ವಿಮಾನಗಳ ನಿರ್ಮಾಣದ ಬಗ್ಗೆ ವಿವರಗಳು ತಿಳಿದುಬರುವುವು. ಈ ದೃಷ್ಟಿಯಿಂದ ಎರಡು ರೀತಿಯ ವಿಮಾನ ನಿರ್ಮಾಣಗಳನ್ನು ಕಾಣಬಹುದು

ಮೊದಲನೆಯದು -- ಅಷ್ಟ ಸಿದ್ಧಿಸಂಪನ್ನವಾದವುಗಳೂ, ಮಹರ್ಷಿಗಳು ಹಾಗೂ ದಿವ್ಯ ಶಕ್ತಿಗಳಿಂದ ಕೂಡಿರುವುಗಳೂ ಆದವುಗಳಾಗಿವೆ-- ದೇವತೆಗಳ ಮುಖಾಂತರ ಸಂಕಲ್ಪ ಮಾತ್ರದಿಂದ ಉತ್ಪನ್ನವಾಗುವ ವಿಮಾನಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ

ಮಹರ್ಷಿ ಕರ್ದಮನು ತನ್ನ ಚಿರಕಾಲದ ಸಮಾದಿಯ ಅವಸ್ಥೆಯಲ್ಲಿಯೂ ಕೂಡ ಅವಿಚಲಳಾಗಿ ಹಾಗೂ ಪ್ರತಿಫಲಾಪೇಕ್ಷೆಯಿಲ್ಲದ ಸೇವೆ ಮಾಡಿದ ತನ್ನ ಪತ್ನಿ ದೇವಹೂತಿಯ ಬಗ್ಗೆ ಸಂತೋಷಗೊಂಡು, ಪ್ರಸನ್ನನಾಗಿ ಯೋಗ ಶಕ್ತಿಯಿಂದ ಕಾಮಗ (ಇಚ್ಛಾನುಸಾರ ಹಾರಾಡುವ) ವಿಮಾನದ ರಚನೆ ಮಾಡಿದನು ಆ ವಿಮಾನವು ಒಳಭಾಗದಲ್ಲಿ ತುಂಬಾ ವಿಸ್ತಾರವಾಗಿದ್ದುದೇ ಅಲ್ಲದೆ ಜೀವನಾವಶ್ಯಕ ಉಪಕರಣಗಳು ಹಾಗೂ ವಸ್ತುಗಳಿಂದ ಸಂಪನ್ನಗೊಂಡಿತ್ತು

ಪ್ರಿಯಾಯಾ ಪ್ರಿಯಮನ್ವಿಚ್ಛನ್
ಕರ್ದಮೋ ಯೋಗಮಾಸ್ಥಿತ
ವಿಮಾನಂ ಕಾಮಗಂ ಕ್ಷತ್ರ--
ಸ್ತರ್ಹ್ಯೇವಾ ವಿರಚೀಕರತ್
(ಶ್ರೀಮದ್ಭಾಗವತ 3--23- 12 )

ವಿದ್ಯಾದರ ಚಿತ್ರಕೇತುವು ಘೋರವಾದ ತಪಸ್ಸು ಮಾಡಿದ ಆವನ ತಪಸ್ಸು ಹಾಗೂ ಪ್ರಾರ್ಥನೆಗಳಿಂದ ಸಂತುಷ್ಟನಾದ ಬಗವಾನ್ ವಿಷ್ಣುವು ಅವನಿಗೆ ಸುಂದರ ವಿಮಾನವೊಂದನ್ನು ನೀಡಿದನು ತೇಜೋಮಯ ಆ ವಿಮಾನವ ಮೇಲೆ ಕುಳಿತು ಅವನು ಪ್ರಯೋಗಿಸುತ್ತಿದ್ದಾಗ, ಸಿದ್ಧಚಾರಣರಿಂದ ಆವೃತನಾದ ಬಗವಾನ್ ಶಂಕರನನ್ನು ನೋಡಿದನು

ಏಕದಾ ಸ ವಿಮಾನೇನ
ವಿಷ್ಣುದತ್ತೇನ ಬಾಸ್ವತಾ
ಗಿರಿಶಂ ದದೃಶೆ ಗಚ್ಛನ್
ಪರೀತಂ ಸಿದ್ಧಚಾರಣೈ
(ಶ್ರೀಮದ್ಭಾಗವತ 6 -17--4 )

ಎರಡನೆಯ ತರಹದ ವಿಮಾನಗಳನ್ನು ವಿಶ್ವಕರ್ಮಾ, ಮಯ -- ದಾನವ ಇತ್ಯಾದಿ ಪ್ರಾಚ್ಯ ವೈಜ್ಞಾನಿಕರ ಮುಖಾಂತರ ರಚಿಸಲ್ಪಟ್ಟ, ವಿಶಿಷ್ಟ ದಿವ್ಯ ಉಪಕರಣಗಳಿಂದ ಕೂಡಿದ ವಿಮಾನಗಳ ಉಲ್ಲೇಖವು ದೊರೆಯುತ್ತದೆ

ರಾಜಾ ಶಾಲ್ವನು ಯದುವಂಶೀಯರಿಂದ ಪರಾಜಯಗೊಂಡನು ಇದರಿಂದ ಹಟತೊಟ್ಟ ಅವನು ಒಂದು ವರ್ಷದವರೆಗೆ ಪ್ರತಿದಿನ ಒಂದು ಹಿಡಿ ದೂಳನ್ನು ಮಾತ್ರ ಆಹಾರವನ್ನಾಗಿ ಸೇವಿಸುತ್ತಾ ಬಗವಾನ್ ಶಂಕರನನ್ನು ಪ್ರಸನ್ನಗೊಳಿಸಿದ ಆತನು ಶಾಲ್ವನಿಗೆ ಒಂದು ವಿಮಾನವನ್ನು ವರವಾಗಿ ನೀಡಿದ ಅದನ್ನು ದೇವತೆಗಳು, ಅಸುರರು, ಗಂದರ್ವರು ನಾಗರು ಹಾಗೂ ರಾಕ್ಷಸರು ನಾಶಪಡಿಸಲು ಸಾದ್ಯವಿರಲಿಲ್ಲ ಅದು ಯಾರ ಅದೀನದಲ್ಲಿರುತ್ತದೆಯೊ ಅವರ ಇಷ್ಟದ ಪ್ರಕಾರ, ಅವರು ಹೇಳುವ ಸ್ಥಳಕ್ಕೆ ಚಲಿಸುತ್ತಿತ್ತು ಇದನ್ನು ಶಂಕರನ ಆಜ್ಞೆಯಂತೆ ಮಯದಾನವನು ನಿರ್ಮಿಸಿದ ಇದಕ್ಕೆ 'ಸೌಬ' ಎನ್ನುವ ಹೆಸರನ್ನು ನೀಡಲಾಯಿತು ಇದು ಶತ್ರುಗಳಿಗೆ ಅಗಮ್ಯವಾದುದಾಗಿತ್ತು

ದೇವಾಸುರ ಮನುಷ್ಯಾಣಾಂ
ಗಂದರ್ವೋರಗ ರಕ್ಷಸಾಮ್
ಅಭೇದ್ಯಂ ಕಾಮಗಂ ವವ್ರೇ
ಸಯಾನಂ ವೃಷ್ಣಿ ಭೀಷಣಮ್

ತವೆ ತಿ ಗಿರಿಶಾದಿಷ್ಟೋ
ಮಯ ಪರಪುರಂಜಯ
ಪುರಂ ನಿರ್ಮಾಯ ಶಾಲ್ವಾಯ
ಪ್ರಾದಾತ್ ಸೌಬಮಯಸ್ಮಯಮ್
ಸ ಲಬ್ಧ್ವಾ ಕಾಮಗಂ ಯಾನಂ
ತಮೋದಾಮ ದುರಾಸದಮ್
(ಶ್ರೀಮದ್ಭಾಗವತ 10 -76- 6,8 )

ಶಾಸ್ತ್ರಗಳು ಹಾಗೂ ಪುರಾಣ ಕವನಗಳ ಅನುಸಾರ ಶಿವ, ಬ್ರಹ್ಮ ವಿಷ್ಣು, ಗಣೇಶ, ಹಾಗೂ ದುರ್ಗ ಇತ್ಯಾದಿ ದೇವತೆಗಳಿಗೆ ನಂದಿ, ಹಂಸ, ಗರುಡ, ಮೂಷಕ, ಹಾಗೂ ಸಿಂಹಗಳು ವಾಹನಗಳಾಗಿದ್ದುದು ತಿಳಿದು ಬರುತ್ತದೆ ಈ ವಾಹನಗಳು ದಿವ್ಯ ತೇಜೋಮಯವಾಗಿದ್ದು, ಅನಂತ ಶಕ್ತಿ ಸಂಪನ್ನವಾಗಿದ್ದುವು. ತಮ್ಮ ಬಾಹ್ಯ ದೇವತೆಗಳಿಗೆ ಅನುರೂಪವಾಗಿಯೇ ಅವೂ ಕೂಡ ದಿವ್ಯ ಶಕ್ತಿ ಹಾಗೂ ಪರಾಕ್ರಮಗಳಿಂದ ಸಂಪನ್ನವಾಗಿದ್ದುವು. ಅಲ್ಲದೆ ಅವು ತಮ್ಮ ಸ್ವಾಮಿಯೊಂದಿಗೆ ಪ್ರತಿಯೊಂದು ಕಲ್ಪದಲ್ಲಿಯೂ ಅದ್ಭುತವಾಗುತ್ತ ಮುಂದುವರಿದುವು. ಅವು ಬಹಳ ಕಾಲದವರೆಗೆ ನಿತ್ಯ ದಿವ್ಯ ಯೌವನದಿಂದ ಕೂಡಿದ್ದು, ಪರಾಕ್ರಮ, ಶಕ್ತಿ ಇತ್ಯಾದಿಗಳಿಂದ ಸಂಪನ್ನವಾಗಿದ್ದುವು.

ಗರುಡನನ್ನು ಇದಕ್ಕೆ ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು ಅವನನ್ನು ಛಂದೋಮಯ, ವೇದಮಯ, ವೇದಾತ್ಮಾ -- ಇತ್ಯಾದಿ ವಿಶೇಷಣಗಳಿಂದ ಹೊಗಳಲಾಗಿದೆ ಅವನು ಚಲಿಸುವಾಗ ಅವನ ರೆಕ್ಕೆಗಳ ಧ್ವನಿಯಿಂದ ಸ್ವತ ಸಾಮವೇದದ ಋಚಗಳ ಗಾನವೇ ಹೊರಹೊಮ್ಮುತ್ತಿತ್ತು

ಇಂತಹ ವಿಶೇಷತೆಗಳು ಇತರೇ ವಾಹನಗಳಲ್ಲಿಯೂ ಇವೆ ಅವು ತಮ್ಮ ಇಚ್ಛಾನುಸಾರ ಯಾವುದೇ ರೂಪವನ್ನಾದರೂ ದಾರಣೆ ಮಾಡಬಲ್ಲಂತಹ ಶಕ್ತಿಯನ್ನು ಪಡೆದಿದ್ದುವು. ಭಗವಾನ್ ನಂದಿಯನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು ಈತನು ವೃಷಭ ರೂಪದಲ್ಲಿ ಪ್ರತಿಷ್ಠಿತನಾಗಿದ್ದು, ಸಕಲರಿಂದ ಪೂಜಿತಗೊಳ್ಳುತ್ತಿದ್ದಾನೆ ಎಲ್ಲ ದೇವತೆಗಳು, ಋಷಿಗಳು ಹಾಗೂ ಹನುಮಂತ ಇತ್ಯಾದಿಯವರುಗಳಿಂದಲೂ ಪೂಜಿಸಲ್ಪಟ್ಟಿದ್ದಾನ

(ಸಂಗ್ರಹ)

# ಕುಂಚ ಕಲಾಚಾರ್ಯ

# ರವಿ ವರ್ಮ

*--ಸಿ ಗೋವಿಂದಾಚಾರ್*

ಕೇರಳ ಎಂದರೆ ಎಲ್ಲೆಲ್ಲೂ ಸುಂದರ ಸ್ತ್ರೀಯರು, ಸುಂದರ ಪರಿಸರ ಮತ್ತು ಪರಿಪೂರ್ಣ ಸಾಕ್ಷರತೆ ಎಂದು ಅರ್ಥ "ಕತ್ತಿಗಿಂತ ತಲೆಯೇ ಶ್ರೇಷ್ಠ" ಎಂಬ ಉಚ್ಚ ನೀತಿಯಿಂದ ಸರ್ವಕಾಲಗಳಲ್ಲಿ ಶಾಂತಿ ಪಾಲನೆ ಶಾಶ್ವತವಾಗಿ ನೆಲೆಸಲು ತಿರುವಾಂಕೂರು ದೊರೆಗಳು ಸರ್ವ ಪ್ರಯತ್ನ ಪಟ್ಟಿರುತ್ತಾರೆ ಕಲೆಯ ಬಗ್ಗೆ ರಾಜರುಗಳು ಆಸಕ್ತಿ ವಹಿಸಿ ಒಂದಲ್ಲ ಒಂದು ವಿಭಾಗದಲ್ಲಿ ಪರಿಣಿತರಾಗುತ್ತಿದ್ದರು ತಿರುವಾಂಕೂರು ವಂಶದ ವ್ಯಾಪ್ತಿಯಲ್ಲಿ ಕಿಳಿಮನೂರ್ ಮನೆತನವೂ ಒಂದು ಇಲ್ಲಿಯ ಮುಖಂಡರನ್ನು 'ವಳಿಯ ಕೋಯಿಲ್ ತಂಪುರಾನ್' ಎಂದು ಕರೆಯುವರು ವೀರ ಯೋದರು ಹಾಗೂ ನಿಪುಣಕಲಾವಿದರೂ ಆದ ಇವರು ತಿರುವಾಂಕೂರಿಗೆ ಸಂಬಂದಿಸಿದ್ದರು ಇವರ ಪೈಕಿ ರವಿವರ್ಮನ ಸೋದರ ಮಾವ ರಾಜರಾಜ ವನವರ್ಮನೂ ಒಬ್ಬ. ಚಿತ್ರಕಲೆಯಲ್ಲಿ ಮೊದಲಿಗೆ ಇವನಿಗೆ ತಂಜಾವೂರಿನ ಖ್ಯಾತ ಕಲಾವಿದ ಅಳಗಿರಿ ನಾಯ್ಡುವಿನಿಂದ ತಂಜಾವೂರು ಶೈಲಿ ಚಿತ್ರದ ಬಗ್ಗೆ ವಿದ್ಯಾಭ್ಯಾಸವಾಗಿತ್ತು ಕೇರಳ ದೊರೆಗಳಿಗೆ ಚಿತ್ರಕಲೆಗಿಂತ ಸಂಗೀತ ಕಲೆ ಹಾಗೂ ಸಾಹಿತ್ಯ ಬೆಳವಣಿಗೆಯಲ್ಲಿ ಅಪಾರ ಆಸಕ್ತಿ ಹಾಗೂ ಶ್ರದ್ಧೆ ಇತ್ತು ತಿರುವಾಂಕೂರಿನಲ್ಲಿ ಚಿತ್ರಕಲೆಯು ಶಾಶ್ವತವಾಗಿ ನೆಲೆಸಲು ಸಾಂಸ್ಥಿಕ ವ್ಯವಸ್ಥೆಗಾಗಿ ರಾಜರಾಜವರ್ಮ ಹವಣಿಸುತ್ತಿದ್ದ ಕೊನೆಗೂ ಆ ಸಂದರ್ಭ ಒದಗಿತು ತಂಜಾವೂರಿನಲ್ಲಿ ಮರಾಠರ ಆಳ್ವಿಕೆ ಕೊನೆಗೊಂಡು ಆಸ್ಥಾನ ವಿಸರ್ಜನೆಯಾಯಿತು ಅಲ್ಲಿಯ ಅಳಗಿರಿ ನಾಯ್ಡು, ರಾಮಸ್ವಾಮಿ ನಾಯಕರ್, ಆರ್ಮುಗಂ ಮುಂತಾದ ಕಲಾಕೋವಿದರು ತಿರುವಾಂಕೂರಿನ ಆಶ್ರಯ ಬಯಸಿದರು ದೊರೆಗಳಿಂದ ಒಳ್ಳೆ ಸೂಚನೆ ಕಂಡು ಬಂತು ಅನಂತರ ಪದ್ಮನಾಭ ಸ್ವಾಮಿ ದೇವಸ್ಥಾನದ ಗೋಡೆಗಳ ಮೇಲೆ, ಅರಮನೆ ಗೋಡೆ, ಗಾಜು ಮತ್ತು ಕನ್ನಡಿಗಳ ಮೇಲೆ ಶ್ರೇಷ್ಠವಾದ ಚಿತ್ರಕಲೆ ಮೂಡಿಬಂದು 1840 ರ ಸುಮಾರಿಗೆ ತಿರುವಾಂಕೂರಿನಲ್ಲಿ ಚಿತ್ರಕಲೆಯು ಅಧಿಕೃತವಾಗಿ ಸ್ಥಾಪನೆಯಾಯಿತು ಅಂದು ದೇಶದ ನಾನಾ ಬಾಗಗಳಲ್ಲಿದ್ದ ಕಲಯೆಂದರೆ ಪಹಾಡಿ, ರಾಜಾಸ್ಥಾನಿ (ನಾದದ್ವಾರದ ಗೋಡೆ ಚಿತ್ರಗಳು) ಮತ್ತು ಮೊಗಲರ ಚಿತ್ರಗಳು 1844 ರಲ್ಲಿ ಮಹಾರಾಣಿ ಲಕ್ಷ್ಮೀಬಾಯಿಯ ಕಿರುಸೋದರಿ ಉಮಾಂಬಾ ಬಾಯಿ ತಂಪುರಾಟ್ಟಿಯ ವಿವಾಹವು ಎಳುಮಾವಿಲ್ ನೀಲಕಂಠನ್ ಭಟ್ಟಾದ್ರಿಪಾದ್ ಎಂಬ ದ್ವಿಜಶ್ರೇಷ್ಠರ ಜೊತೆ ನೆರವೇರಿತು ಇವರ ಜೀವನ ಕಿಳಿಮನೂರಿನಲ್ಲಿ ಸ್ಥಾಪಿತವಾಯಿತು ಈ ದಿವ್ಯ ದಂಪತಿಗಳಿಗೆ 1845 ರಲ್ಲಿ ರಾಜವರ್ಮನೂ, 1848 ರಲ್ಲಿ ರವಿವರ್ಮನೂ ಜನಿಸಿದರು ಕ್ರಮೇಣ ಗೋದಾವರ್ಮ ಎಂಬ ತಮ್ಮನೂ ಮಂಗಳಾಬಾಯಿ ಎಂಬ ತಂಗಿಯೂ ಹುಟ್ಟಿದರು ಉಮಾಂಬ ಬಾಯಿ ತಂಪುರಾಟ್ಟಿ ನಿಪುಣ ಚಿತ್ರಕಲೆಗಾರಳಾಗಿದ್ದಳು ಇವಳು ಮಾವೆ ಲಿಕ್ಕರ ಕೋಟ್ಟರಮ್ ಎಂಬ ಮನೆತನಕ್ಕೆ ಸೇರಿದವಳು

ರವಿವರ್ಮನಿಗೆ ಚಿತ್ರಕಲೆಯಲ್ಲಿ ಆಸಕ್ತಿ ಉಂಟುಮಾಡಿ ಕ್ರಮೇಣ ಅದರಲ್ಲೇ ಪರಿಣಿತನಾಗಲು ಶ್ರಮಿಸಿದವನು ಸೋದರ ಮಾವನೇ ಬಾಲ್ಯದಿಂದಲೂ ಎಲ್ಲಾರೀತಿಯ ಪ್ರೋತ್ಸಾಹವನ್ನು ನೀಡುತ್ತಿದ್ದ ಆದರೆ ಆಸ್ಥಾನದಿಂದ ಸಾಕಷ್ಟು ಉತ್ತೇಜನ ಇಲ್ಲವಲ್ಲಾ ಎಂದು ಬೇಸರಗೊಂಡ ಅಳಿಯನನ್ನಾಗಿ ಮಾಡಿಕೊಳ್ಳುವ ಬಗ್ಗೆ ಆಯಿಲ್ಯಾಂ ತಿರುನಾಳರು ಮಾಡಿದ ತಿರಸ್ಕಾರದಿಂದ ರವಿವರ್ಮನ ಜೀವನದಲ್ಲಿ ಹೊಸ ಅದ್ಯಾಯ ಆರಂಭವಾಯಿತು ಚಿತ್ರಕಲೆಯನ್ನು ವೃತ್ತಿಯಾಗಿ ಮಾಡಿಕೊಂಡ ಗ್ರಹಿಸುವ ಶಕ್ತಿ ಇವನಲ್ಲಿ ಅಪಾರವಾಗಿತ್ತು ತಜ್ಞರ ಕಲಾಕೃತಿಗಳನ್ನು ಕೇವಲ ಗಮನಿಕೆಯಿಂದಲೇ ಕಲಿತ ಗೆರೆ ಚಿತ್ರಗಳಿಗಾಗಿ ಸದಾ ತನ್ನ ಜೇಬಿನಲ್ಲಿ ಚಿಕ್ಕ ಪುಸ್ತಕವನ್ನೂ ಇಟ್ಟಿರುತ್ತಿದ್ದ ಮೊದಲು ಗೆರೆ ಚಿತ್ರಗಳನ್ನು ಸೂಕ್ಷ್ಮವಾಗಿ ಚಿತ್ರಿಸಿಕೊಂಡು ಕಲಾಶಾಲೆಯಲ್ಲಿ ಅದನ್ನೇ ಸ್ಥೂಲವಾಗಿಸಿ ಜೀವಕಳೆ ತುಂಬುತ್ತಿದ್ದ ಖ್ಯಾತ ಡಚ್ ಕಲೆಗಾರ ಥಿಯೋಡರ್ ಜೆನ್ಸನ್ನಿನಿಂದ ತೈಲವರ್ಣ ಸಂಯೋಜನೆಯನ್ನು ಗಮನಿಕೆಯಿಂದ ಕಲಿತು ಬಾರತದಲ್ಲಿ ಪ್ರದಮವಾಗಿ ಪ್ರದರ್ಶಿಸಿದ ಶುಕ್ಲಪಕ್ಷದ ಚಂದ್ರನಂತೆ ಕಲೆಯಲ್ಲಿ ಉನ್ನತಿ ಹೊಂದಿದ 18 ನೇ ವಯಸ್ಸಿನಲ್ಲಿ ಪುರೂರುಟ್ಟಿಟಿನಾಳ್ ತಂಪುರಾಟ್ಟಿಯನ್ನು ವಿವಾಹವಾಗಿ ಸರಳ ಜೀವನವನ್ನು ಸಾಗಿಸಿದ ಸದಾಚಾರ ಸಂಪನ್ನನಾಗಿ ದ್ವಿಜಕುಲ ಸಂಪ್ರದಾಯವನೇ ಅನುಸರಿಸಿದ ಅರಮನೆಯಲ್ಲಿ ಪಿತೂರಿ ಒಳಜಗಳ ಮತ್ತು ರಾಜಕೀಯಗಳಿಂದ ಸದಾ ದೂರ ವಿರುತ್ತಿದ್ದ ಕುಂಚ ಕಲೆಯನ್ನು ಬಾಳಸಂಗಾತಿಯಂತೆ ಕಂಡ

ರವಿವರ್ಮನ ಚಿತ್ರಗಳನ್ನು 4 ವಿದವಾಗಿ ವಿಂಗಡಿಸಬಹುದು

೧ ಪರಿಸರ ಮತ್ತು ಸಾಮಾನ್ಯ ಜೀವನದ ಚಿತ್ರಗಳು -- ಕೆರೆ, ಕೊಳ, ದೇವಸ್ಥಾನ, ಅರಮನೆ, ಕೊರವಂಜಿ ಇತ್ಯಾದಿ

೨ ಪೌರಾಣಿಕ ಚಿತ್ರಗಳು

೩ ಭಾರತಕ್ಕೆ ಆಗಮಿಸಿದ ರಾಯಬಾರಿಗಳು ಮತ್ತು ಗೌರ್ನರ್ ಜನರಲ್‌ಗಳ ಭಾವಚಿತ್ರಗಳು ನಿಂತು ಅದವ ಕುಳಿತಿರುವ ಬಂಗಿಮುದ್ರೆಗಳಲ್ಲಿ ವ್ಯಕ್ತಿತ್ವ ಹಾಗೂ ಆಳದ ಭಾವವಿದ್ದುದರಿಂದ ಇವುಗಳಿಗೆ ಅಪಾರವಾದ ಬೇಡಿಕೆ ಇತ್ತು "ಇದು ನನ್ನ ಕಲಾತತ್ವ ಹಾಗೂ ಜೀವಾಳ" ಎಂದು ರವಿವರ್ಮನು ಸಂದರ್ಶನಗಳಲ್ಲಿ ಹೇಳಿದ್ದ ರಾಜಮಹಾರಾಜರುಗಳಿಂದ ಅಮೂಲ್ಯವಾದ ಬಹುಮಾನಗಳು ಸಿಗುವುದೆಂಬ ಆಸೆಯಿಂದ ಐರೋಪ್ಯ ಕಲಾಕಾರರು ಬಾರತಕ್ಕೆ ಮೇಲಿಂದ ಮೇಲೆ ಬರುತ್ತಿದ್ದರು ಆದರೆ ಅವರಾರೂ ರವಿವರ್ಮನ ಕಲೆಗೆ ಸಮರಾಗಲಿಲ್ಲ

೪ ವಿವಿಧ ಭಂಗಿಗಳಲ್ಲಿ ಮತ್ತು ಭಾವಾವೇಶಗಳನ್ನೊಳಗೊಂಡ ಭಾರತೀಯಸ್ತ್ರೀಯರು- ಕೇರಳ ಹೆಂಗಸು, ಬೇಗಮ್, ಐಯ್ಯಂಗಾರ್ ಹೆಂಗಸು, ದೇಶದ ನಾನಾ ಪ್ರಾಂತ್ಯಗಳ ಸ್ತ್ರೀಯರ ವೇಷಭೂಷಣ ಮತ್ತು ಭಾವನೆಗಳನ್ನೂ ಸೂಚಿಸುವ 'ಗ್ಯಾಲಕ್ಸಿ' ಚಿತ್ರ (ಇದೊಂದು ವಿವಿದ ವಾದ್ಯಗಳನ್ನು ನುಡಿಸುತ್ತಿರುವ ಸಂಗೀತಗಾರರ ಚಿತ್ರ) ಇದರ ಜೊತೆಗೆ ಪುರಾಣಗಳಲ್ಲಿ ಬರುವ ದ್ರೌಪದಿ, ಸೀತೆ, ತಾರೆ, ಶಕುಂತಲೆ ಮುಂತಾದ ನಾರೀಮಣಿಯರ ಚಿತ್ರಗಳು ಮತ್ತು ಆಯಾಯಾ ಕೋಮಿನ ಅಬಿರುಚಿಗೆ ತಕ್ಕಂದಾ ಚಿತ್ರಗಳು

ಒಂದೇ ವ್ಯಕ್ತಿಯ ಚಿತ್ರಗಳು ವಿವಿದ ಭಾವಗಳಲ್ಲಿ ಮತ್ತು ಹೆಸರುಗಳಲ್ಲಿ ವಿಕಾಸಗೊಂಡಿವೆ ಅಂದರೆ ಒಂದೇ ತರಹದ ಮುಖ ಸೌಂದರ್ಯ ಮತ್ತು ಅಂಗಸೌಷ್ಟವಗಳನ್ನೊಳಗೊಂಡ ಸ್ತ್ರೀ ಚಿತ್ರಗಳನ್ನು ವಿವಿಧ

ಬಂಗಿ ಮುದ್ರೆಗಳಲ್ಲಿ ಸೃಷ್ಟಿಸಿ ಬೇರೆ ಬೇರೆ ಹೆಸರುಗಳಿಂದ ಖ್ಯಾತಿಗೊಳಿಸಿದ್ದಾನೆ ಉಯ್ಯಾಲೆ ಆಡುತ್ತಿರುವ ಮೋಹಿನಿಯನ್ನು 'ಸ್ವಿಂಗಿಂಗ್ ಬ್ಯೂಟಿ', ಹೆವೆನ್ಲಿ ಮೇಡನ್ಸ್ ಎಂದೂ, ಕನ್ನಡಿಯ ಮುಂದೆ ಶೃಂಗರಿಸಿ ಕೊಳ್ಳುತ್ತಿರುವವಳನ್ನು ಲೇಡಿ ಎಟ್ ದಿ ಟಾಯ್ಲೆಟ್' ಎಂದೂ, ವೀಣೆಯ ಮುಂದೆ ನಿದ್ರಿಸುತ್ತಿರುವವಳನ್ನು ಸ್ಲೀಪಿಂಗ್ ಬ್ಯೂಟಿ', ಬೆಳದಿಂಗಳಿನಲ್ಲಿರುವವಳನ್ನು ಲೇಡಿ ಇನ್ ಮೂನ್‌ಲೈಟ್ ಎಂದೂ, ಗಿಟಾರ್‌ನಂತಿರುವ ವೀಣೆಯನ್ನು ನುಡಿಸುತ್ತಿರುವ ಸುಂದರಿಯನ್ನು ಭಾರತೀಯರಿಗೆ 'ಶಾರದಾ' ಎಂದೂ ಪಾಶ್ಚಾತ್ಯರಿಗೆ ನಾಯರ್ ಲೇಡಿ, ಮಲಬಾರ್/ಕೇರಳಾ ಬ್ಯೂಟಿ ಎಂದೂ ಪ್ರಸಿದ್ಧಿಗೊಳಿಸಿದ್ದಾನೆ ಇದೇ ರೀತಿಯಲ್ಲಿ ದ್ರೌಪದಿ ಕೀಚಕರನ್ನು 'ಬ್ಯೂಟಿ ಅಂಡ್ ದಿ ಬೀಸ್ಟ್' ಎಂದು ಕರೆದಿದ್ದಾನೆ

'ಶಕುಂತಲ' ಇವನು ಬರೆದ ಪ್ರದಮ ಹಾಗೂ ಮಾಸ್ಟರ್ ಪೀಸ್ ಚಿತ್ರ ಇದರ ಸರಣಿಯಲ್ಲಿ ಒಟ್ಟು 10 ಚಿತ್ರಗಳಿವೆ ಮೋಡುತ್ತಮದೋಮ್ ಪಂಗಡಕ್ಕೆ ಸೇರಿದ ನಾಯರ್ ಸುಂದರಿಯೊಬ್ಬಳನ್ನು ಮಾದರಿಗಾಗಿ ನಿಲ್ಲಿಸಿ/ಕೂರಿಸಿ ಚಿತ್ರವನ್ನು ಸೃಷ್ಟಿಸಿದ್ದ ಇದೇ 'ಶಕುಂತಲ'ದ ರಹಸ್ಯ ಬೊಂಬಾಯಿ ರಂಗಭೂಮಿಯಿಂದ ಇಂದ ಅನೇಕ ಮಾದರಿಗಳನ್ನು ಸೃಷ್ಟಿಸಿದ್ದಾನೆ ಇದೀಗ ರವಿವರ್ಮ ಒಬ್ಬ ಸಂಪೂರ್ಣ ಕಲೆಗಾರ

1873 ರವಿವರ್ಮನ ಜೀವನದಲ್ಲಿ ಒಂದು ಮೈಲಿಗಲ್ಲು ಮದರಾಸ್ ಲಲಿತ ಕಲಾವಸ್ತು ಪ್ರದರ್ಶನದಲ್ಲಿ ಇವನ ಚಿತ್ರಗಳ ಪೈಕಿ 'ನಾಯರ್ ಲೇಡಿ' ಸ್ವರ್ಣ ಪದಕಗಳಿಸಿತು ರವಿವರ್ಮ ಮದರಾಸಿಗೆ ದಾವಿಸಿದ ಇವನ ಕಲೆಯನ್ನು ಪ್ರಶಂಸಿಸಿದ ಗೌರ್ನರ್ ಲಾರ್ಡ್ ನೇಪಿಯರ್ ಜೊತೆ ಸಂದರ್ಶನ ದೊರೆತು ರವಿವರ್ಮನ ಕಲೆಗೆ ಒಳ್ಳೆಯ ಪ್ರಚಾರ ಸಿಕ್ಕಿತು ವಿಷಯ ತಿರುವಾಂಕೂರಿಗೂ ಮುಟ್ಟಿತು ಸಂತಸಗೊಂಡ ಕೇರಳ ವರ್ಮ ತಿರುನಾಳರು ತೈಲವರ್ಣ ಪೆಟ್ಟಿಗೆ ಯೊಂದನ್ನು ರವಿವರ್ಮನಿಗೆ ಬಹೂಕರಿಸಿ 'ಸೀತಾಭೂಪ್ರವೇಶಂ' ದೊಡ್ಡ ಚಿತ್ರ ಬರೆದು ಆಸ್ಥಾನಕ್ಕೆ ಸಮರ್ಪಿಸು ಎಂದು ಹೇಳಿದಾಗ ರವಿವರ್ಮನ ಸಂತೋಷಕ್ಕೆ ಪಾರವೇ ಇಲ್ಲ ಗಣ್ಯರು ತಂತಮ್ಮ ಬಾವ ಚಿತ್ರಗಳನ್ನು ಬರೆಯಲು ಆದೇಶ ಕೊಡುವುದಲ್ಲದೆ ರವಿವರ್ಮನು ಬರೆದ ಚಿತ್ರಗಳನ್ನು ಕೊಂಡುಕೊಳ್ಳುತ್ತಿದ್ದರು ಆದೇಶಗಳ ಮಹಾಪೂರ ರವಿವರ್ಮನಿಗೆ ತಡೆಯಲು ಅಸಾಧ್ಯವಾಯಿತು ಇವನ ಸೋದರರಾದ ರಾಜವರ್ಮ, ಗೋದಾವರ್ಮ ಮತ್ತು ಸೋದರಿ ಮಂಗಳಾಬಾಯಿ ನೆರವಾಗುತ್ತಿದ್ದರು ಈ ಸಂದರ್ಭದಲ್ಲೇ 'ಮೈ ಲ್ಯಾಮೆಂಟೆಡ್ ಬ್ರದರ್' ಎಂಬ ರವಿವರ್ಮನ ಬಾವ ಚಿತ್ರವನು ಮಂಗಳಾಬಾಯಿ ಬರೆದಳು (ತಿರುವನಂತಪುರ ಹಾಗೂ ಮೈಸೂರಿನಲ್ಲಿದೆ) ಪಿತನಿಗೆ ತಕ್ಕ ಪುತ್ರ ರಾಮವರ್ಮರಾಜ ಇವರೆಲ್ಲರೂ ಸೇರಿ ಬಾರಿ ಆಕಾರದ 'ಶ್ರೀಕೃಷ್ಣಜನನ' ಮತ್ತು ಸೀತಾ ಸ್ವಯಂವರ ಚಿತ್ರಗಳನ್ನು ಸೃಷ್ಟಿಸಿದರು

ರವಿವರ್ಮನ ಕುಂಚಕಲೆಯನ್ನು ಕಣ್ಣಾರ ನೋಡಲು 'ಇಷ್ಟೇ ಎಂದು ಒರಿ' ಎಂದು ಮೈಸೂರು, ಬರೋಡ, ಉದಯಪುರಗಳಿಂದ ಮೇಲಿಂದ ಮೇಲೆ ಆದೇಶಗಳು ಬರತೊಡಗಿದವು ಸೋದರನಾದ ರಾಜವರ್ಮನು ರವಿವರ್ಮನಿಗ ಆಪ್ತಕಾರ್ಯದರ್ಶಿಯಂತೆ ಸಹಕರಿಸುತ್ತಿದ್ದ ಇವರು ಹೋದಡ ವೈಬವ, ಸ್ವಾಗತ, ಉಪಚಾರಗಳು, ಬಾಷಾಂತರ ಹಾಗೂ ಪುರಾಣಗಳ ಅಧ್ಯಯನಕ್ಕಾಗಿ ತಜ್ಞರ ನೆರವು, ಅಡಿಗೆಯವನು, ಆಳುಕಾಳು ಇನ್ನೂ ಎಲ್ಲಾ ಸೌಕರ್ಯಗಳು ದೊರಕುತ್ತಿತ್ತು

'ಸೀತಾ ಬೂಪ್ರವೇಶಂ' ಬರೋಡಾದಲ್ಲಿ ಅಲೆ ಎಬ್ಬಿಸಿತು ಲಕ್ಷ್ಮಿ, ಸರಸ್ವತಿ, ದಮಯಂತಿ, ಸೀತಾ, ಸೈರಂದ್ರಿ, ದ್ರೌಪದೀ ವಸ್ತ್ರಾಪಹರಣ ಮುಂತಾದ ಚಿತ್ರಗಳನ್ನು ಸವಿದ ಸಯ್ಯಾಜಿರಾವ್ ಗಾಯಕವಾಡರು 50,000 ರೂ ಗಳ ಒಪ್ಪಂದದ ಮೇಲೆ ರಾಮಾಯಣ -- ಮಹಾಭಾರತದ ತಲಾ 7 ಚಿತ್ರಗಳನ್ನು ಬರೆಯಲು ಆದೇಶ ನೀಡಿದರು ಇದನ್ನು ಪೂರೈಸಲು ಕಾಲಾವಕಾಶವನ್ನು ಕೇಳಿ ಉದಯಪುರಕ್ಕೆ ಬೇಟಿಕೊಟ್ಟು ರಾಣಾಪ್ರತಾಪಸಿಂಹ, ಪತೇಸಿಂಗ್ ಗಾಯಕವಾಡ್ ಮುಂತಾದ ಚಾರಿತ್ರಿಕ ವ್ಯಕ್ತಿ ಚಿತ್ರಗಳನ್ನು ಬರೆದುಕೊಟ್ಟು ಉತ್ತರ ಬಾರತದ ಪ್ರಮುಖ ಪಟ್ಟಣ, ಯಾತ್ರಾಸ್ಥಳಗಳನ್ನು ಸಂದರ್ಶಿಸಿ ಹೈದರಾಬಾದಿನಲ್ಲಿ 'ರಿಟೈರ್ಡ್ ಸೋಲ್ಜರ್' ಎಂಬ ಚಿತ್ರವನ್ನು ಬರೆದು ಅಲ್ಲಿಯ ಜನರ ಮೆಚ್ಚುಗೆಗೆ ಪಾತ್ರನಾಗಿ ಸ್ವಸ್ಥಾನಕ್ಕೆ ಮರಳಿದಾಗ ಸೋದರ ಮಾವ ಸನ್ಯಾಸ ಸ್ವೀಕರಿಸಿದ್ದು ತಿಳಿಯಿತು ಅವನ ಬಾವಚಿತ್ರವನ್ನು ಬರೆದು 5000 ರೂಪಾಯಿಗಳನ್ನು ಬಹೂಕರಿಸಿದ

1885, 1887 ಮತ್ತು 1904 ನಲ್ಲಿ ಮೈಸೂರಿಗೆ ಬೇಟಿಯಿತ್ತ ಪರಿವಾರದ ಚಿತ್ರಗಳು, ಹಂಸ ದಮಯಂತಿ, ಸೇತುಬಂದನ, ರಾಮ ಬಿಲ್ಲು ಮುರಿಯುವುದು, ಇಂದ್ರಜಿತ್, ರಾವಣ - ಜಟಾಯು ಯುದ್ದ, ಭೀಷ್ಮಪ್ರತಿಜ್ಞೆ, ಪಾಂಡವದೂತ, ಶ್ರೀಕೃಷ್ಣ ಬಲರಾಮ, ಗ್ಯಾಲಕ್ಸಿ, ದರೋಗ, ಇನಸ್ಪೆಕ್ಟರ್ ಚೆಲುವಯ ಮುಂತಾದ ಚಿತ್ರಗಳನ್ನು ಸಮರ್ಪಿಸಲಾಯಿತು ಕೂರಿಕ ವರಗ ಕವಲ 2 ಗಂಟೆಗಳ ಅವಧಿಯಲ್ಲಿ ಯತಿರಾಜರ ಚಿತ್ರವನ್ನು ಸೃಷ್ಟಿಸಿದ ವರ್ಮ್ ರಾಜಕುಮಾರನ ಜೊತೆ ಖಡ್ಡಾಕಾರ್ಯಕ್ರಮ ವೀಕ್ಷಿಸುವ ಅವಕಾಶ ಒದಗಿದಾಗ 'ಖೆಡ್ಡಾ' ಚಿತ್ರವೂ ತಯಾರಾಗಿ "ಮಿಂಚಿನಂದಾ ಕಲಗಾರ" ಎಂಬ ಪ್ರಶಂಸೆಯೂ ದೊರೆಯಿತು ಬಿಡಾರಂ ಕೃಷ್ಣಪ್ಪನವರಿಂದ ಕಲಿತ ಎರಡು ಕೀರ್ತನೆಗಳಿಗೆ ಪ್ರತಿಯಾಗಿ ರವಿವರ್ಮನು ಅವರ ಬಾವಚಿತ್ರವನ್ನು, ಚಿನ್ನದ ನಾಣ್ಯವನ್ನೂ ಬಹೂಕರಿಸಿದ

ಮಾತಾ, ಪಿತ ಮತ್ತು ಪತ್ನಿ ವಿಯೋಗವಾದಾಗ ಕುಂಚಕಲೆಗ ಸಂಪೂರ್ಣ ವಿರಾಮ ಕೊಟ್ಟಿದ್ದ ಆದರ ಮನಸ್ಸು ಕೆಲಸ ಮಾಡುತ್ತಲೇ ಇತ್ತು ಸೇತು ಬಂದನ, ಕಂಸಮಾಯ, ಗಂಗಾವತರಣ, ಶ್ರೀಕೃಷ್ಣ ಸಂದಾನ ಮುಂತಾದ ಉದ್ವೇಗ ಬಾವಗಳನ್ನು ಸೂಚಿಸುವ ಚಿತ್ರಗಳನ್ನು, ಗಂಗಾಶಂತನು, ರಾದಾ ಮಾದವ, ಅರ್ಜುನ ಸುಬದ್ರ, ವಿಶ್ವಾಮಿತ್ರ ಮೇನಕೆ, ಹರಿಶ್ಚಂದ್ರ ತಾರಾಮತಿ - ಮುಂತಾದ ಪ್ರಣಯ ಚಿತ್ರಗಳನ್ನು ಮತ್ತು ಕಷ್ಟಕಾರ್ಪಣ್ಯಗಳನ್ನು ಸೂಚಿಸುವ ನಳದಮಯಂತಿ, ಹರಿಶ್ಚಂದ್ರ ಚಿತ್ರಗಳನ್ನು ಸೃಷ್ಟಿಸಿ ತನ್ನ ಕಲೆಯ 'ಪರ್ಸ್‌ಪೆಕ್ಟಿವ್' ತತ್ವವನ್ನು ನಿರೂಪಿಸಿದ ಸಂಪ್ರದಾಯ ಹಾಗೂ ಆಸ್ಥಾನದ ಕಟ್ಟು ಪಾಡಿನಿಂದಲೂ ಎಷ್ಟೋ ಆಹ್ವಾನಗಳಿದ್ದರೂ ರವಿವರ್ಮ ವಿದೇಶ ಪ್ರವಾಸ ಮಾಡಲಿಲ್ಲ ಲಂಡನ್, ಪ್ಯಾರಿಸ್, ವಿಯನ್ನ ಮತ್ತು ಚಿಕಾಗೋಗಳಲ್ಲಿ ಇವನ ಚಿತ್ರಗಳು ಪ್ರತಿನಿದಿಸಿದ್ದುವು. ಇವನ ಚಿತ್ರಗಳ ಮೇಲೆ ಜನರ ಪ್ರಶಂಸೆ ಎಷ್ಟಿತ್ತೆಂಬುದನ್ನು ಕುರಿತು ಅಂದು ಚಿಕಾಗೋದಲ್ಲೇ ಇದ್ದ ಸ್ವಾಮಿ ವಿವೇಕಾನಂದರೂ ತಮ್ಮ ಭಾರತೀಯ ಮಿತ್ರನಿಗೆ ದೀರ್ಘ ಪತ್ರವೊಂದರಲ್ಲಿ ಬರೆದಿದ್ದರು ರವಿವರ್ಮನಂತೆಯೇ ರವೀಂದ್ರನಾದ ಟಾಗೂರರಿಗೂ ಭಾರತೀಯ ಸ್ತ್ರೀತ್ವ ನೆಚ್ಚಿನ ವಿಷಯ "ಕಲ್ಕತ್ತೆಯಲ್ಲಿ ಇವನ ಚಿತ್ರಗಳು ಮನೆಮಾತಾಗಿದೆ ಇವನ ಚಿತ್ರಗಳಿಲ್ಲದ ಮನೆ ಇಲ್ಲ ಮಂದಿರವಿಲ್ಲ" ಎಂದು ಹೊಗಳಿದ್ದಾರೆ ಕೆಲವು ಚಿತ್ರಗಳ ಬಗ್ಗೆ ಟೀಕೆಯನ್ನೂ ಮಾಡಿದ್ದಾರೆ ಇವನ ಕೃತಿಗಳನ್ನು ನೋಡಿ ಮೆಚ್ಚಿದವರ ಪೈಕಿ ಕವಿ ಸುಬ್ರಹ್ಮಣ್ಯ ಭಾರತಿಯೂ ಒಬ್ಬರು

ಇವನು ರಾಜನೇ ? ಅಲ್ಲ -- ಇವನು ತಿರುವಾಂಕೂರ್ ವಂಶದವನು ಎಂದು ಭಾವಿಸಿ ಪಾಶ್ಚಾತ್ಯರು ಪ್ರಶಸ್ತಿಪತ್ರಗಳಲ್ಲಿ ಮತ್ತು ಪತ್ರ ವ್ಯವಹಾರಗಳಲ್ಲಿ ಹೆಸರಿನ ಹಿಂದೆ 'ರಾಜ' ಎಂದು ಸೇರಿಸಿದ್ದರಿಂದ 'ರಾಜ ರವಿವರ್ಮ' ಆಯಿತು 'ಇದು

ಹೇಗೆ ಸಾಧ್ಯ? ಇವನು ರಾಜವಂಶದ ಶ್ರೇಣಿಯಲ್ಲಿ ಬಂದವನಲ್ಲ' ಎಂದು ದೊರೆಗಳು ಆಕ್ಷೇಪಿಸಿದ್ದಲ್ಲದೆ ಪರಿಹಾಸ್ಯವನ್ನು ಮಾಡುತ್ತಿದ್ದರು ಅದೂ ಅಲ್ಲದೆ ಪ್ರವಾಸಿಗರು ಅನಂತಶಯನನನ್ನು ಸೇವಿಸಿದ ನಂತರ ರವಿವರ್ಮನ 'ಕೃಷ್ಣವಿಲಾಸ್' ಅರಮನೆ ಮುಂದೆ ಬಂದು 'ರವಿವರ್ಮ ಮಹಾರಾಜ್‌ಕಿ ಜೈ' ಎಂದು ಜಯಕಾರ ಮಾಡುತ್ತಿದ್ದರು 1904 ರಲ್ಲಿ ಇಂಪೀರಿಯಲ್ ಸರ್ಕಾರ ರವಿವರ್ಮನಿಗೆ ಕೈಸರ್ - ಎ -- ಹಿಂದ್ ಪ್ರಶಸ್ತಿನೀಡಿ ಗೌರವಿಸಿತು ಚಿತ್ರಕಲಾಕಾರರ ಪೈಕಿ ಈ ಪ್ರಶಸ್ತಿ ಪಡೆದ ಮೊದಲಿಗ ರವಿವರ್ಮನೆ ತಿರುವಾಂಕೂರು ಸಂತೋಷದ ಸಾಗರದಲ್ಲಿ ಮುಳುಗಿತು ಮೂಲಂ ತಿರುನಾಳರ ಪಟ್ಟಾಭಿಷೇಕ ಸಮಾರಂಭವನ್ನು ಅನಂತಪದ್ಮನಾಭ ಸ್ವಾಮಿ ಸನ್ನಿಧಿಯ ಒತ್ತಕಲ್ ಮಂಟಪದಲ್ಲಿ ಏರ್ಪಡಿಸಲಾಗಿತ್ತು ರವಿವರ್ಮನೂ ಅಲ್ಲಿದ್ದ 'ವರ್ಷಕ್ಕೆರಡು ಭಾರಿ ಆಕಾರದ ಪೌರಾಣಿಕ ಚಿತ್ರಗಳನ್ನು ಆಸ್ಥಾನಕ್ಕೆ ಸಮರ್ಪಿಸು' ಎಂದು ತಿರುನಾಳರು ಆದೇಶ ನೀಡಿದರು ಶ್ರೀ ಚಿತ್ರಾಲಯ ಸ್ಥಾಪನೆಯಾಗಲು ಇದು ನಾಂದಿಯಾಯಿತು ರವಿವರ್ಮನ ಎಲ್ಲಾ ಚಿತ್ರಗಳೂ ಪ್ರದಮ ಬಾರಿಗೆ ತಿರುವನಂತಪುರದಲ್ಲಿ ಪ್ರದರ್ಶನವಾಯಿತು ಮೂಲಂ ತಿರುನಾಳರ ಹಠಾತ್ ನಿದನದಿಂದ ಚಿತ್ರಾತಿರುನಾಳರು ಪಟ್ಟಕ್ಕೆ ಬಂದರು ಇವರ ಕಾಲದಲ್ಲೇ ಶ್ರೀ ಚಿತ್ರಾಲಯವು ಸ್ಥಾಪಿತವಾಗಿ ರವಿವರ್ಮನ ಚಿತ್ರಗಳನ್ನು ಇಲ್ಲಿಗೆ ವರ್ಗಾಯಿಸಲಾಯಿತು ವಸ್ತುಪ್ರದರ್ಶನಗಳ ವಹಿವಾಟು ಕೊನೆಗೊಂಡಿತು

ವ್ಯವಹಾರಿಕ ದೃಷ್ಟಿಯಿಂದ ತನ್ನ ಕಲಾಕೃತಿಗೆ ಶಾಶ್ವತವಾದ ಸಂಸ್ಥೆಯೊಂದನ್ನು ಆರಂಬಿಸಲು ಖ್ಯಾತ ವ್ಯಾಪಾರ, ಕೈಗಾರಿಕೋದ್ಯಮಿಗಳ ನೆರವಿನಿಂದ ಬೊಂಬಾಯಿಯ ಘಾಟ್ಕೋಪರ್‌ನಲ್ಲಿ ರವಿವರ್ಮ ಲಿಥೋಗ್ರಾಫಿಕ್ ಪ್ರೆಸ್ ಅನ್ನು ಸ್ಥಾಪಿಸಿದ 1894 ರಲ್ಲಿ ಶಕುಂತಲ ಸರಣಿ ಚಿತ್ರಗಳು ಹೊರಬಂದುವು ಕ್ರಮೇಣ ವಿವಿದ ಸ್ತ್ರೀ ಚಿತ್ರಗಳು ಮತ್ತು ನಾನಾ ಕೋಮುಗಳ ಅಬಿರುಚಿಗೆ ತಕ್ಕಂದಾ ದೇವರುಗಳ ಚಿತ್ರಗಳು 3 ಸೈಜುಗಳಲ್ಲಿ ಬಂದುವು ಜರ್ಮನಿಯಿಂದ 4 ಜನ ತಜ್ಞರನ್ನು ಯಂತ್ರೋಪಕರಣಗಳನ್ನು ಆಮದು ಮಾಡಿಕೊಳ್ಳಲಾಯಿತು ರವಿವರ್ಮನ ಚಿತ್ರಗಳು 'ಜರ್ಮನ್ ಪ್ರಿಂಟ್' ಚಿತ್ರಗಳೆಂದು ಪ್ರಸಿದ್ಧಿಯಾದುವು. ಬೇರೆ ಬೇರೆ ಕಲೆಗಾರರು ತಾವು ಬರೆದ ಚಿತ್ರಗಳನ್ನು ಇಲ್ಲೇ ಮುದ್ರಿಸಿಕೊಂಡು ಜರ್ಮನ್ ಪ್ರಿಂಟ್ ಎಂದು ಪ್ರಚಾರ ಮಾಡಿ ಬಿರುಸಿನಿಂದ ವ್ಯಾಪಾರ ಮಾಡಲಾರಂಬಿಸಿದರು ರಾಜಕೀಯ ಗಲಬೆಯಿಂದ ಮುದ್ರಣಾಲಯವನ್ನು ಪೂನಾದ ಲೋನೌಲ ಪಟ್ಟಣದ ಸಮೀಪವಿರುವ ಮಲಾವ್ಲಿ ಎಂಬ ಸ್ಥಳಕ್ಕೆ ವರ್ಗಾಯಿಸಲಾಯಿತು ಕ್ಯಾಲೆಂಡರ್ ಕಂಪೆನಿಗಳು ರವಿವರ್ಮನ ಚಿತ್ರಕಲೆಗೆ ಮುಳ್ಳಾದವು. ನಕಲಿ ಚಿತ್ರಗಳು ಖೋಟಾ ಸಹಿ ಮತ್ತು 'ಮೇಡ್ ಆಸ್' ಜರ್ಮನ್ ಚಿತ್ರಗಳು ಇದ್ದಕ್ಕಿದ್ದಂತೆ ಹುಟ್ಟಿಕೊಂಡವು. ಇದನ್ನು ತಪ್ಪಿಸಲು ರವಿವರ್ಮ ತನ್ನ ಚಿತ್ರಗಳಿಗೆ ತಾನೇ ಪೂರ್ಣ ಸಹಿಯನ್ನು ಹಾಕಲಾರಂಬಿಸಿದ ಸಂಪಾಟನೆ ಹಾಗೂ ನಿರ್ವಹಣಾತೊಂದರೆಯಿಂದ ರವಿವರ್ಮ ಮುದ್ರಣಾಲಯವನ್ನು 25000 ರೂಗಳಿಗೆ ಮತ್ತು 100 ಚಿತ್ರಗಳ ಕಾಪಿರೈಟ್‌ಗೆ ಮಾರಿದ ಕುಂಚಕಲೆಗೆ ಸಂಪೂರ್ಣ ವಿರಾಮವಿತ್ತ ಮದುಮೋಹವ್ಯಾದಿಯಿಂದ 1 ವರ್ಷನರಳಿ ಅಕ್ಟೋಬರ್ 2, 1906 ರಂದು ಸ್ವರ್ಗಸ್ಥನಾದ ಭಾರತದಿಂದ ನಿರ್ಗಮಿಸಿದ ಗೌರ್ನರ್‌ಗಳಿಂದ ಶ್ರದ್ಧಾಂಜಲಿ ಮತ್ತು ಪ್ರಶಂಸೆಗಳ ಸುರಿಮಳೆ ಯಾಯಿತು

"ವಿಶ್ವದ ಪೂರ್ವಾರ್ದ ಗೋಳದ ಮಹಾನ್ ಕಲೆಗಾರ" -- "ಚಿತ್ರ ಕಲೆಯ ದೈತ್ಯ" - 1870 ರಿಂದ 1906 ರ ವರೆಗೆ ಚಿತ್ರಕಲಾರಂಗದಲ್ಲಿ ಅದ್ವಿತೀಯವಾಗಿ ಮೆರೆದ -- ಭಾರತದ ಕುಂಚಕಲೆಯ ಪಿತಾಮಹ - ಇತ್ಯಾದಿ ಕವಿ ಸುಬ್ರಹ್ಮಣ್ಯ ಬಾರತಿಗಳು ದೊಡ್ಡ ಕವಿತೆಯನ್ನೇ ಸೃಷ್ಟಿಸಿ 'ತಾನು ಬರೆದ ಚಿತ್ರಗಳು ದೇವತೆಗಳನ್ನು ಸರಿಯಾಗಿ ಹೋಲುತ್ತದೆಯೋ ಎಂದು ನೋಡಲು ಸ್ವರ್ಗಕ್ಕೇರಿದ್ದಾನೆ ಇವನು ಇದ್ದಿದ್ದು ಭ್ರಮೆಯೋ ಕನಸೋ ಆಗಿದೆ' ಎಂದು ವರ್ಣಿಸಿದ್ದಾರೆ

ರವಿವರ್ಮ ಅಮರನಾದರೂ ಅವನ ವ್ಯಕ್ತಿತ್ವ ಮತ್ತು ಕಲೆ ಅಚ್ಚಳಿಯದೆ ಶಾಶ್ವತವಾಗಿ ಉಳಿದಿದೆ ಪ್ರಕಾಂಡ ಪಾಂಡಿತ್ಯವಿದ್ದರೂ ಇನ್ನೂ ಕಲಿಯಬೇಕೆಂಬ ಹಂಬಲವಿತ್ತು ತನ್ನ ಕಲೆಯನ್ನು ಎಲ್ಲರೂ ಮೆಚ್ಚಲೇಬೇಕೆಂಬ ಅತಿ ಆಸೆ ಅವನಿಗಿರಲಿಲ್ಲ, 'ತನ್ನ ಕಲೆ ಸಾರ್ವಜನಿಕರಿಗೂ ತಲುಪಬೇಕೆಂಬ ಉದ್ದೇಶದಿಂದ ಸರ್ಕಾರಿ ಅಧಿಕಾರಿಗಳು ಜಮೀನ್‌ದಾರ, ಶಿಕ್ಷಕ ಮುಂತಾದವರ ಬಾವಚಿತ್ರಗಳನ್ನು ಬರೆದು ಕೊಡುತ್ತಿದ್ದ ಒಳ ಹಾಗೂ ಹೊರಗಿನ ಕಲಾಸ್ಪರ್ದಿಗಳಿಂದ ಕಹಿಯಾದ ಟೀಕೆಗಳು ಎರಗಿದರೂ ಅದನ್ನು ಶಾಂತರೀತಿಯಿಂದ ನೋಡುತ್ತಿದ್ದ

ಸೌಂದರ್ಯದ ಬಿಂಬಾಕೃತಿಯನ್ನು ಎಲ್ಲರ ಹೃನ್ಮನಗಳಲ್ಲಿ ತಳವೂರುವಂತೆ ಮಾಡಿದವನುವ ರವಿವರ್ಮ ದೇವತೆಗಳನ್ನು ರಕ್ತ ಮಾಂಸಗಳಿಂದ ತುಂಬಿದ ಮನುಷ್ಯರಂತೆ ಚಿತ್ರಿಸಿದ, ಸೊಬಗು, ಶೃಂಗಾರ, ಅಲಂಕಾರ ಮತ್ತು ಉಡಿಗೆ ತೊಡಿಗೆಗಳಲ್ಲಿ ಬಾರಿ ಅನ್ವೇಷಣೆ ಮಾಡಿ ಕ್ರಾಂತಿ ಎಬ್ಬಿಸಿದ ಇವನ ಚಿತ್ರದ ಮಾದರಿಗಳು ನಾಟಕ ಹಾಗೂ ಸಿನಿಮಾರಂಗದಲ್ಲಿ ದೃಶ್ಯಗಳನ್ನು ಬರೆಯುವವರಿಗೆ ಪ್ರೇರಕವಾಗಿತ್ತು ದೇವಲೋಕದ ಶಕುಂತಲಾ ರವಿವರ್ಮನ 'ಶಕುಂತಲೆ' ಆಗಿದ್ದಾಳೆ ಇವನ ಕುಂಚ ಕಲೆಯ ಪ್ರಬಾವದಿಂದ ಚಿತ್ರರಂಗದ ಸೆಟ್‌ಗಳು ವಿಕಾಸಗೊಂಡು ನಾಜೂಕಾದ ಮಾರ್ಗ ಹಿಡಿಯಿತು ಕ್ಯಾಲೆಂಡರ್‌ಗಳಲ್ಲಿ, ಬಿಸ್ಕತ್‌ಡಬ್ಬಗಳ ಮೇಲೆ ಬೀಡಿಕಟ್ಟು ಪಟಾಕಿ ಬಾಣ ಬಿರುಸುಗಳ ಮೇಲೆಲ್ಲಾ ಇವನ ವಸ್ತುಗಳೇ ವ್ಯಾಪಿಸಿದೆ ಸ್ವಪ್ರಯತ್ನದಿಂದ, ಸ್ವೇಚ್ಛೆಯಿಂದ ಅದ್ವಿತೀಯನಾಗಿ ಕುಂಚಕಲೆಯ ಭೀಷ್ಮಾಚಾರ್ಯನಾಗಿ 5 ದಶಕಗಳ ವರೆಗೆ ಮೆರೆದ ಮಹಾನ್ ರವಿವರ್ಮ ಇತಿಹಾಸಪುಟಗಳಲ್ಲಿ ಶಾಶ್ವತವಾಗಿರುತ್ತಾನೆ

ಇವನ ಚಿತ್ರಗಳ ಸಂಗ್ರಹಣೆ ತಿರುವನಂತ ಪುರದ ಶ್ರೀ ಚಿತ್ರಾಲಯ ಮೈಸೂರಿನ ಜಗನ್ ಮೋಹನ ಅರಮನೆ, ಮದರಾಸಿನ ರಾಷ್ಟ್ರೀಯ ಚಿತ್ರಾಲಯ ಮತ್ತು ಬರೋಡಾದ ಲಕ್ಷ್ಮೀ ವಿಲಾಸ್ ಅರಮನೆಗಳಲ್ಲಿದೆ *

# ವಿಶ್ರಾಮಧಾಮ

ತಿರುಪತಿಯಿಂದ ತಿರುಮಲೆಗೆ ಅಲಿಪಿರಿಯ ಮೂಲಕ ಮೆಟ್ಟಿಲು ಹತ್ತಿ ಹೋಗುವವರ ವಿಶ್ರಾಂತಿಗಾಗಿ ಅಲಿಪಿರಿಯ ಬಳಿ ಒಂದು ಅತಿಥಿಗೃಹವನ್ನು ನಿರ್ಮಿಸಲಾಗಿದೆ ಇಲ್ಲಿ ವಾಹನಗಳನ್ನು ನಿಲ್ಲಿಸಲು, ಅವಕಾಶವಿದ್ದು, ಉಪಹಾರ ಗೃಹವೂ ಇದೆ ಇಲ್ಲಿನ ಸುಸಜ್ಜಿತ ಕೊಠಡಿಗಳಿಗೆ ದಿನವೊಂದಕ್ಕೆ ಬಾಡಿಗೆ ಮೂವತ್ತು (30/) ರೂಗಳು ಮಾತ್ರವಿದ್ದು ಯಾತ್ರಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿಸಲಾಗಿದೆ

ಮುಂಗಡ ಕಾಯ್ದಿರಿಸುವಿಕೆಗಾಗಿ ಹತ್ತು ದಿನಗಳ ಮೊದಲು ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) - ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ - ಇವರಿಗೆ ಬರೆಯಬೇಕು

# ತಿರುಪತಿಯಲ್ಲಿ ಪ್ರಧಾನಮಂತ್ರಿ

## ಅನ್ನಮಾಚಾರ್ಯ ವಿಗ್ರಹ ಅನಾವರಣ

ತಿರುಪತಿಯಲ್ಲಿ ಏಪ್ರಿಲ್ ತಿಂಗಳಿನಲ್ಲಿ ನಡೆದ ಕಾಂಗ್ರೆಸ್ ಮಹಾದಿವೇಶನದಲ್ಲಿ ಪಾಲುಗೊಳ್ಳಲು ಬಂದ ಬಾರತ ಪ್ರದಾನಮಂತ್ರಿ, ಶ್ರೀ ಪಿ ವಿ ನರಸಿಂಹರಾವ್ ಅವರು ಏಪ್ರಿಲ್ 14 ರಂದು ತಿರುಪತಿಯ ಆಕಾಶವಾಣಿ ಕೇಂದ್ರದ ಬಳಿಯ ಕೂಡು ರಸ್ತೆಯ ನಡುವಣ ವೃತ್ತದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳವರು ಏರ್ಪಾಡು ಮಾಡಿದ ಅನ್ನಮಾಚಾರ್ಯ ವಿಗ್ರಹವನ್ನು ಅನಾವರಣಗೊಳಿಸಿದರು ಈ ಕಾರ್ಯಕ್ರಮದಲ್ಲಿ ಆಂದ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್ ಜನಾರ್ದನ ರೆಡ್ಡಿ, ತಿ ತಿ ದೇ ಅದ್ಯಕ್ಷರು ಶ್ರೀ ಟಿ ಸುಬ್ಬರಾಮಿರೆಡ್ಡಿ, ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಮೊದಲಾದವರು ಬಾಗವಹಿಸಿದ್ದರು

## ತಿರುಮಲೆಯಲ್ಲಿ ಪ್ರದಾನಿ

ಏಪ್ರಿಲ್ 17 ರಂದು ಶುಕ್ರವಾರ ಪ್ರದಾನಮಂತ್ರಿಗಳು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾದಿಸಿದರು ದೇವಾಲಯದ ಮಹಾದ್ವಾರದಲ್ಲಿ ಆಲಯ ಮರ್ಯಾದೆಯನುಸಾರ ಅವರನ್ನು ಸ್ವಾಗತಿಸಲಾಯಿತು ತಿ ತಿ ದೇ ಅದ್ಯಕ್ಷರು ಶ್ರೀ ಟಿ ಸುಬ್ಬರಾಮಿರೆಡ್ಡಿ, ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್, ತಿ ತಿ ದೇ ದರ್ಮಕರ್ತರ ಮಂಡಳಿಯ ಸದಸ್ಯರು ಮುಂತಾದವರು ಅವರನ್ನು ಸ್ವಾಗತಿಸಿದರು ಸ್ವಾಮಿ ದರ್ಶನದ ನಂತರ ಅವರಿಗೆ ರಂಗನಾಯಕ ಮಂಟಪದಲ್ಲಿ ಆಲಯಪಂಡಿತರಿಂದ ವೇದೋಕ್ತ ಆಶೀರ್ವಚನ ನೀಡಲಾಯಿತು ತಿ ತಿ ದೇ ಅದ್ಯಕ್ಷರು ಪ್ರದಾನಮಂತ್ರಿಗಳಿಗೆ ಆಲಯ ಪ್ರಸಾದಗಳನ್ನೂ ಬಂಗಾರದ ಪದಕವನ್ನೂ ನೀಡಿ ಸತ್ಕರಿಸಿದರು

ಸ್ವಾಮಿ ದರ್ಶನದ ನಂತರ ಪ್ರದಾನ ಮಂತ್ರಿ ಸರತಿಯಸಾಲಿನಲ್ಲಿ ನಡೆದು ಹುಂಡಿಯಲ್ಲಿ ಕಾಣಿಕೆಯನ್ನು ಸಮರ್ಪಿಸಿದರು

ಪ್ರದಾನಿಯೊಂದಿಗೆ ಮುಖ್ಯಮಂತ್ರಿಗಳು ಶ್ರೀ ಎನ್ ಜನಾರ್ದನರೆಡ್ಡಿ, ಶ್ರೀ ಕರುಣಾಕರನ್, ಕೇಂದ್ರ ಮಂತ್ರಿಗಳು ಡಾ|| ಚಿಂತಾ ಮೋಹನ್, ಶ್ರೀ ರಾಮೇಶ್ವರ ಠಾಕೂರ್, ಆಂದ್ರಪ್ರದೇಶ ವಿಧಾನಸಭಾದ್ಯಕ್ಷ ಶ್ರೀ ಶ್ರೀಪಾದರಾವ್ ಮೊದಲಾದವರಿದ್ದರು

ತಿರುಮಲೆಯಲ್ಲಿನ ದರ್ಮಗಿರಿಯನ್ನು ಸಂದರ್ಶಿಸಿದ ಪ್ರದಾನಮಂತ್ರಿ ಶ್ರೀ ಪಿ ವಿ ನರಸಿಂಹರಾವ್ ಅವರು ಅಲ್ಲಿ ವೇದ ವಿಜ್ಞಾನ ಪರಿಷತ್‌ಗಾಗಿ ನಿರ್ಮಿಸಲಾಗಿರುವ ಕಟ್ಟಡಗಳನ್ನು ಸಬಾಬವನವನ್ನು ಪರಿಶೀಲಿಸಿದರು ತಿರುಮಲೆಯಲ್ಲಿ ವೇದವಿಶ್ವವಿದ್ಯಾನಿಲಯವನ್ನು ಆರಂಬಿಸುವ ಬಗ್ಗೆ ಆಲೋಚನೆ ನಡೆಸುವುದಾಗಿ ಅವರು ತಿಳಿಸಿದರು

## ದೂರದರ್ಶನ ಮರು ಪ್ರಸಾರಕೇಂದ್ರದ ಆರಂಬ

ತಿರುಮಲೆಯಲ್ಲಿ ಹೊಸದಾಗಿ ಏರ್ಪಾಡು ಮಾಡಿದ ಹತ್ತು ಕಿಲೋ ವ್ಯಾಟ್‌ಗಳ ದೂರದರ್ಶನ ಮರುಪ್ರಸಾರದ ಬಹುಶಕ್ತಿಕೇಂದ್ರವನ್ನು ಪ್ರದಾನಿ ಶ್ರೀ ಪಿ ವಿ ನರಸಿಂಹರಾವ್ ಅವರು ಏಪ್ರಿಲ್ 17 ರಂದು ಉದ್ಘಾಟಿಸಿದರು

ಈ ಕಾರ್ಯಕ್ರಮದಲ್ಲಿ ಮಾತನಾಡುತ್ತ ಆಂದ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್ ಜನಾರ್ದನರೆಡ್ಡಿಯವರು ವೇದಗಳ ಬಗ್ಗೆ ಪ್ರಸಾರ, ಪರಿಶೀಲನೆ, ಪರಿಶೋದನೆಗಳಿಗೆ ತಿರುಮಲೆ ಕೇಂದ್ರವಾಗಬೇಕು ಎಂದು ಕರೆ ನೀಡಿದರು ಕೇಂದ್ರ ಸಮಾಚಾರ ಶಾಖಾ ಮಂತ್ರಿ ಶ್ರೀ ಅಜಿತಕುಮಾರ ಪಾಂಜಾ ಅವರು ಆರಂಬೋಪನ್ಯಾಸಮಾಡಿದರು




ಕಾರ್ಯಕ್ರಮದಲ್ಲಿ ಡಾ|| ಗಿರಿಜಾವ್ಯಾಸ್, ಡಾ|| ಚಿಂತಾಮೋಹನ್, ಶ್ರೀ ರಾಮೇಶ್ವರ ಠಾಕೂರ್, ಆಂದ್ರಪ್ರದೇಶದ ಮಂತ್ರಿಗಳು ಶ್ರೀ ಸಮರಸಿಂಹಾರೆಡ್ಡಿ, ಶ್ರೀ ರೋಶಯ್ಯ, ತಿ ತಿ ದೇ ಅದ್ಯಕ್ಷ ಶ್ರೀ ಸುಬ್ಬರಾಮಿರೆಡ್ಡಿ ಮತ್ತಿತರರು ಪಾಲುಗೊಂಡಿದ್ದರು

ನಂತರ ಶ್ರೀಮತಿ ನನ್ನಪನೇನಿ ರಾಜಕುಮಾರಿ ಬರೆದ ಭಕ್ತಿಗೀತೆಗಳ ಧ್ವನಿಸುರುಳಿಯನ್ನು ಪ್ರದಾನ ಮಂತ್ರಿ ಬಿಡುಗಡೆ ಮಾಡಿದರು

## ಬರ್ಡ್‌ನಲ್ಲಿ ಪ್ರದಾನಿ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ತಿರುಪತಿಯಲ್ಲಿ ನಡೆಯುತ್ತಿರುವ ಬರ್ಡ್-- ಬಾಲಾಜಿ ಅಂಗವಿಕಲ ಶಸ್ತ್ರ ಚಿಕಿತ್ಸಾ ಪರಿಶೋದನೆ, ಪುನರಾವಾಸ ಸಂಸ್ಥೆಯವರ ಆಸ್ಪತ್ರೆಯನ್ನು ಪ್ರದಾನಮಂತ್ರಿ ಶ್ರೀ ಪಿ ವಿ ನರಸಿಂಹರಾವ್ ಅವರು ಸಂದರ್ಶಿಸಿದರು ತತ್ಸಮಯದಲ್ಲಿ ಬರ್ಡ್‌ನವರು ಏರ್ಪಡಿಸಿದ್ದ ಸದಯಲ್ಲಿ ಪಾಲುಗೊಂಡು ಬಾಷಣಮಾಡಿದರು ಕಾಂಗ್ರೆಸ್ ಮಹಾದಿವೇಶನದ ಸ್ವಾಗತ ಸಮಿತಿಯು ಬರ್ಡ್‌ಗೆ ಹತ್ತು ಲಕ್ಷ ರೂಗಳ ವಂತಿಗೆಯನ್ನು ನೀಡಿದ್ದು ಹಣದ ಚೆಕ್ ಅನ್ನು ರಾಜ್ಯ ಮುಖ್ಯಮಂತ್ರಿ ಶ್ರೀ ಎನ್ ಜನಾರ್ದನರೆಡ್ಡಿ ಅವರು ತಿ ತಿ ದೇ ಅದ್ಯಕ್ಷ ಶ್ರೀ ಟಿ ಸುಬ್ಬರಾಮರೆಡ್ಡಿ ಅವರಿಗೆ ಪ್ರದಾನಿಯ ಮೂಲಕ ನೀಡಿದರು

ಆರಂಭದಲ್ಲಿ ತಿ ತಿ ದೇ ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರು ಉಪನ್ಯಾಸ ಮಾಡಿದರು

ಈ ಕಾರ್ಯಕ್ರಮದಲ್ಲಿ ಪಿ ಸಿ ಸಿ ಅದ್ಯಕ್ಷರು ಶ್ರೀ ಮಜ್ಜಿ ತುಲಸೀದಾಸ್, ಬರ್ಡ್ ನಿರ್ದೇಶಕ ಡಾ|| ವ್ಯಾಘ್ರೇಶ್ವರುಡು, ಕೇಂದ್ರಮಂತ್ರಿ ಶ್ರೀ ಚಿಂತಾಮೋಹನ್, ಶ್ರೀ ಮೂಪನಾರ್ ಮೊದಲಾದವರು ಬಾಗವಹಿಸಿದ್ದರು

## ಅನ್ನದಾನಯೋಜನೆಗೆ 5 ಲಕ್ಷ ದತ್ತಿ

ತಿರುಮಲೆಯಲ್ಲಿನ ಯಾತ್ರಿಕ ಬಕ್ತರಿಗೆ ನಿತ್ಯವೂ ಉಚಿತ ಬೋಜನವನ್ನು ಒದಗಿಸುವ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆಗೆ ತಮಿಳುನಾಡಿನವರಾಗಿ ಈಗ ಮಲಯೇಷಿಯಾದಲ್ಲಿರುವ ಡಾ|| ಕೆ ಗೋವಿಂದರಾವ್ ಅವರು 5 ಲಕ್ಷ ರೂಗಳನ್ನು ದತ್ತಿಯಾಗಿ ನೀಡಿರುವುದು ವರದಿಯಾಗಿದೆ

## ಹುಂಡಿಯಲ್ಲಿ ಹತ್ತು ಲಕ್ಷ ರೂಗಳ ಕಾಣಿಕೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಹುಂಡಿಯಲ್ಲಿ ಅಜ್ಞಾತ ಭಕ್ತರೊಬ್ಬರು ಹತ್ತು ಲಕ್ಷ ರೂಪಾಯಿಗಳ ಕಾಣಿಕೆಯನ್ನು ಹಾಕಿದ್ದಾರೆ ಈ ನಡುವಣ ಕಾಲದಲ್ಲಿ ಇದು ಅತಿಹೆಚ್ಚಿನ ಕಾಣಿಕೆ ಎಂದು ಅದಿಕಾರಿಗಳು ತಿಳಿಸಿದರೆಂದು ವರದಿಯಾಗಿದೆ

## ವೈಭವದ ಪದ್ಮಾವತೀ ಪರಿಣಯ

ತಿರುಮಲೆಯಲ್ಲಿ ಈ ವರ್ಷ ಹೊಸದಾಗಿ ಪ್ರವೇಶಗೊಳಿಸಲಾದ ಆರ್ಜಿತ ಸೇವ ಶ್ರೀ ಪದ್ಮಾವತೀ ಪರಿಣಯೋತ್ಸವ ಯಶಸ್ವಿಯಾಗಿ ಬಹು ವೈಭವದಿಂದ ನಡೆಯಿತು

ನಾರಾಯಣ ಗಿರಿಯ ಉದ್ಯಾನವನದಲ್ಲಿ ಶೋಭಾಯಮಾನವಾಗಿ ಅಲಂಕರಿಸಲ್ಪಟ್ಟ ಪರಿಣಯ ಮಂಟಪಕ್ಕೆ ಆಲಯದಿಂದ ಶ್ರೀ ಮಲೆಯಪ್ಪಸ್ವಾಮಿಯನ್ನು ಗಜರಾಜ ವಾಹನನಾಗಿಯೂ, ಶ್ರೀದೇವಿ ಭೂದೇವಿಯವರನ್ನು ಪಲ್ಲಕ್ಕಿಯಲ್ಲೂ ಮೆರವಣಿಗೆಯಲ್ಲಿ ಬಿಜಯಗ್ಯೆಸಿ ಅಲ್ಲಿನ ವೇದಿಕೆಯಲ್ಲಿ ಆಸೀನಗೊಳಿಸಿ, ಕಂಚಿ ಕಾಮಕೋಟಿ ಪೀಠಾದಿಪತಿ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು ವಧೂವರರ ಪರವಾಗಿ ವಸ್ತ್ರ ಬಹುಮಾನ ನೀಡಿ ವಿವಾಹ ಮಹೋತ್ಸವವನ್ನು ನೆರವೇರಿಸಿ ಹೊಚೆಂಡಿನಾಟವಾಡಿಸಿದರು

ಈ ಸೇವೆ ಮೂರು ದಿನಗಳಕಾಲ ನಡೆದು ಭಾಗವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆದವು. ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿಗಳಿಂದ ಉಪನ್ಯಾಸ, ಶ್ರೀಮತಿ ಪದ್ಮಾ ಸುಬ್ರಹ್ಮಣ್ಯಂ ನಾಟ್ಯಸೇವೆ, ಹರಿಕದೆ, ಮೆಂಡೋಲಿನ್ ಶ್ರೀನಿವಾಸ್ ವಾದ್ಯಸೇವೆ, ಮೊದಲಾದವು ನಡೆದವು.

ಅನೇಕ ಗೃಹಸ್ಥರು ಭಕ್ತಯಾತ್ರಿಕರೂ ಪಾಲುಗೊಂಡಿದ್ದರು

***

## ಅನ್ನಮಾಚಾರ್ಯರ 489 ನೇ ವರ್ಧಂತಿ

ತಾಳ್ಳಪಾಕ ಅನ್ನಮಾಚಾರ್ಯರ 489 ನೇ ವರ್ದಂತಿ ಸಪ್ತಾಹ 30- 3 -92 ರಿಂದ 5- 4- 92 ರ ವರೆಗೆ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಯಶಸ್ವಿಯಾಯಿತು

30--3- 92 ರಂದು ಬೆಳಗ್ಗೆ ತಿ ತಿ ದೇ ಗಳ ಪರಿಪಾಲನಾ ಭವನದಿಂದ ಅನ್ನಮಾಚಾರ್ಯ, ಪೆದ ತಿರುಮಲಯ್ಯ, ಶ್ರೀ ವೆಂಕಟೇಶ್ವರಸ್ವಾಮಿಯವರುಗಳ ವಿಗ್ರಹಗಳನ್ನು ಮೆರವಣಿಗೆಯಲ್ಲಿ ಅನ್ನಮಾಚಾರ್ಯ ಕಲಾಮಂದಿರದವರೆಗೆ ತರಲಾಯಿತು ಈ ಮರವಣಿಗೆಯನ್ನು ತಿ ತಿ ದೇ ಜೆ ಇ ಓ ಶ್ರೀ ಜನಾರ್ದನ ನಾಯುಡು ಆರಂಬಿಸಿದರು ಅನ್ನಮಾಚಾರ್ಯ ಕಲಾಮಂದಿರದಲ್ಲಿ ಶ್ರೀ ಕೋದಂಡರಾಮ ಸ್ವಾಮಿಯವರ ಆಸ್ಥಾನ ನಡೆದು ಅನ್ನಮಾಚಾರ್ಯ ಕಲಾವಿದರಿಂದ ದಿನವು ದ್ವಾದಶಿಯಿಂದು ಹಾಡು ನಡೆಯಿತು ವಿಶ್ವನಾದ ಪಾವನಿ ಶಾಸ್ತ್ರಿಗಳು ಅನ್ನಮಾಚಾರ್ಯರ ಬಾಗವತತತ್ವದ ಬಗ್ಗೆ ಉಪನ್ಯಾಸ ನೀಡಿದರು ತಿರುಪತಿಯ ಶ್ರೀ ಎ ಶಬರಿಗಿರೀಶ ಅವರು ಸಂಗೀತ ಸಭೆ ನಡೆಸಿದರು

ಅಂದು ಸಂಜೆಯ ಸಬೆಯ ಅದ್ಯಕ್ಷತೆ ವಹಿಸಿದ ಡಾ|| ರಾವುಲಸೂರ್ಯನಾರಾಯಣ ಮೂರ್ತಿಯವರು ಅನ್ನಮಾಚಾರ್ಯರ ಸಂಕೀರ್ತನೆಗಳ ಪ್ರಸಾರದಲ್ಲಿ ಪರಿಶೋದನೆಯಲ್ಲಿ ತಿ ತಿ ದೇ ಗಳ ಪಾತ್ರವನ್ನು ವಿವರಿಸಿದರು ಅನ್ನಮಾಚಾರ್ಯ ಪ್ರಾಜೆಕ್ಟ್ ಅದಿಕಾರಿ ಡಾ|| ಮೇಡಸಾನಿ ಮೋಹನ್ ಅವರು ಹಿಂದಿನ ವರ್ಷದ ಪ್ರಾಜೆಕ್ಟ್ ವರದಿಯನ್ನು ನೀಡಿದರು ಮುಖ್ಯ ಅತಿದಿಯಾಗಿ ಆಗಮಿಸಿದ ಡಾ|| ಸಿ ಅನ್ನಾರಾವ್ ಅವರು ತಾಳ್ಳಪಾಕ ವಂಶೀಕರನ್ನು ಸತ್ಕರಿಸಿದರು ಶ್ರೀಮತಿ ಎಂ ಸುಶೀಲ ಅವರ ಸಂಗೀತ ಸಬೆನಡೆದ ಮೇಲೆ ಶ್ರೀ ಆರ್ ಕೆ ಶ್ರೀಕಂಠನ್ ಅವರ ಸಂಕೀರ್ತನ ಕಚೇರಿ ನಡೆಯಿತು

31 -4--92 ರಂದು ಶ್ರೀ ಪಿ ವಿ ಸತ್ಯನಾರಾಯಣ ಅವರು ಅನ್ನಮಾಚಾರ್ಯರ ಕೀರ್ತನೆಗಳಲ್ಲಿನ ಜಾನಪದ ಅಂಶಗಳನ್ನು ವಿವರಿಸಿ, ಪುರಂದರ ಕನಕದಾಸರುಗಳು ಅನ್ನಮಾಚಾರ್ಯರ ಕೀರ್ತನೆಗಳಿಂದ ಪ್ರಭಾವಿತರಾದದ್ದನ್ನು ವಿವರಿಸಿದರು ನಂತರ ಶ್ರೀಮತಿ ಪಿ ಗೌರಿಶಾಸ್ತ್ರಿಯವರ ಸಂಗೀತ ಕಚೇರಿ ನಡೆಯಿತು ಅಂದು ಸಂಜೆ 6 ಗಂಟೆಗೆ ಶ್ರೀ ಪಿ ಎಸ್ ರಂಗನಾದ್ 7 -30 ಕ್ಕೆ ಶ್ರೀಮತಿ ಟಿ ಟಿ ಸೀತ ಅವರುಗಳು ಅನ್ನಮಯ್ಯ ಪದಗಳನ್ನು ಹಾಡಿ ರಂಜಿಸಿದರು

1--4--92 ರಂದು ಡಾ|| ಎ ಗೋಪಾಲರಾವ್ ಅನ್ನಮಾಚಾರ್ಯರ ಕೀರ್ತನೆಗಳಲ್ಲಿನ ಲೋಕಜ್ಞತೆಯನ್ನೂ, ಶ್ರೀ ಜಂದ್ಯಾಲ ಜಯಕೃಷ್ಣ ಬಾಪೂಜಿ ಅವರು 'ಅನ್ನಮಯ್ಯನ ಪದಗಳಲ್ಲಿನ ಔಚಿತ್ಯವನ್ನು' ಕುರಿತೂ ಮಾತನಾಡಿದರು ನಂತರ ಸರ್ವಶ್ರೀ ಜಿ ಬಾಲಕೃಷ್ಣ ಪ್ರಸಾದ್, ಪಿ ಎಸ್ ರಂಗನಾದ್, ಜಿ ನಾಗೇಶ್ವರ ನಾಯುಡು ಅವರುಗಳ ಅನ್ನಮಾಚಾರ್ಯ ಸಂಕೀರ್ತನ ಲಹರಿ ಕಾರ್ಯಕ್ರಮ ನಡೆಯಿತು ಅಂದು ಸಂಜೆ ಶ್ರೀಮತಿ ಜಿ ಜಾನಕಿ ಅವರ ಸಂಗೀತದ ನಂತರ ಶ್ರೀಮತಿ ಉಮಾ ಮುದ್ದುಬಾಲ

## ಶ್ರೀ ಆರ್ ಕೃಷ್ಣಮೂರ್ತಿ ಶಾಸ್ತ್ರಿ ನಿದನ

ಸುಪ್ರಸಿದ್ಧ ವೇದಪಂಡಿತರೂ ರಾಜಾ ಲಕ್ಷ್ಮಿ ಫೌಂಡೇಷನ್ ಪ್ರಶಸ್ತಿ ಸ್ವೀಕರಿಸಿದವರೂ ಆದ ಶ್ರೀ ರಾಮವರಪು ಕೃಷ್ಣಮೂರ್ತಿ ಶಾಸ್ತ್ರಿಗಳು ಶುಕ್ರವಾರ ದಿನಾಂಕ 1--5--92 ರಂದು ಮದರಾಸಿನಲ್ಲಿ ಮೃತರಾದರೆಂದು ತಿಳಿಸಲು ವಿಷಾದವಾಗುತ್ತದೆ

ಶ್ರೀಯುತರು ಕೃಷ್ಣಯಜುರ್ವೇದವನ್ನು ತೆಲುಗುಭಾಷೆಗೆ ಅನುವಾದ ಮಾಡಿದ್ದು ಹತ್ತು ಭಾಗಗಳಲ್ಲಿ ಹರಿದಿರುವ ಈ ಗ್ರಂದದ ಮೊದಲ ಐದು ಭಾಗಗಳನ್ನೂ ತಿ ತಿ ದೇ ಈಗಾಗಲೇ ಪ್ರಕಟಿಸಿದ್ದು ಮಿಕ್ಕ ೫ ಭಾಗಗಳೂ ಪ್ರಕಟವಾಗಲಿವೆ

ಶ್ರೀ ಶಾಸ್ತ್ರಿಯವರ ಮರಣದ ಬಗ್ಗೆ ಸಂತಾಪವನ್ನು ವ್ಯಕ್ತಗೊಳಿಸುತ್ತ ತಿ.ತಿ.ದೇ ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರು ಈ ಮರಣದಿಂದಾಗಿ ತಿ ತಿ ದೇ ಗಳಿಗೂ ವೇದ ಪ್ರಿಯರಿಗೂ ಭಾರೀ ನಷ್ಟವುಂಟಾಗಿದೆಯೆಂದೂ, ಅವರು ವೇದ ಪ್ರಸಾರದ ವಿವಿದ ಯೋಜನೆಗಳಲ್ಲಿ ಬಹು ಉಪಯುಕ್ತ ಸಲಹೆಗಳನ್ನು ನೀಡುತ್ತಿದ್ದ ರೆಂದೂ ತಿಳಿಸುತ್ತ ಯಜುರ್ವೇದ ಆರನೇ ಭಾಗ ಮುದ್ರಣದಲ್ಲಿದಯೆಂದೂ ತ್ವರೆಯಾಗಿ ಎಲ್ಲ ಭಾಗಗಳನ್ನೂ ಪ್ರಕಟಿಸುವ ಉದ್ದೇಶವಿದೆಯೆಂದೂ ತಿಳಿಸಿದರು

ಶ್ರೀ ರಾಮವರಪು ಕೃಷ್ಣಮೂರ್ತಿ ಶಾಸ್ತ್ರಿಯವರ ಮರಣಕ್ಕೆ ತಿ ತಿ ದೇ ಪೌರಸಂಬಂದ ಶಾಖಾದಿಕಾರಿ ಶ್ರೀ ಡಾ|| ರಾವುಲ ಸೂರ್ಯನಾರಾಯಣ ಮೂರ್ತಿ ಅವರೂ ತೀವ್ರಸಂತಾಪವನ್ನು ವ್ಯಕ್ತಪಡಿಸಿದ್ದಾರೆ

ಭಗವಂತನು ಅವರ ಆತ್ಮಕ್ಕೆ ಶಾಂತಿಯನ್ನು ನೀಡಲೆಂದು ಸಪ್ತಗಿರಿ ಪ್ರಾರ್ದಿಸುತ್ತದೆ

-- ಸಂ||

ವರಿಂದ ಅನ್ನಮಯ್ಯ ಕವಿತೆಯಲ್ಲಿನ ರುಕ್ಮಿಣೀ ಲ್ಯಾಣ ನೃತ್ಯ ರೂಪಕ ನಡೆಯಿತು

2- 4--92 ರಂದು ಬೆಳಗ್ಗೆ ಡಾ|| ಸಿ ಸುಂದರ ರಾಮಶರ್ಮ ಅವರು ಕವಿಯ ತಾತ್ವಿಕತೆಯನ್ನು ುರಿತೂ, ಕುಮಾರಿ ಬಾಸ್ಕರ ಸ್ವರ್ಣಾಂಬ ಅವರು ವಿ ಕಂಡ ಸತ್ಯವನ್ನು ಕುರಿತೂ ಮಾತನಾಡಿದರು ುಮಾರಿ ಕೆ ವಿಶಾಲಾಕ್ಷಿ ಅವರಿಂದ ಸಂಗೀತ ಸಬೆ ಡೆಯಿತು ಅಂದು ಸಂಜೆ ಶ್ರೀ ಜಿ ನಾಗೇಶ್ವರರಾವು ಅವರ ಗಾಯನವೂ ನಂತರ ಶ್ರೀಮತಿ ವೇದವತಿ ಪ್ರಭಾಕರರಾವು ಅವರ ಗಾಯನವೂ ನಡೆದವು.

3--4--92 ರಂದು ಬೆಳಗ್ಗೆ ಡಾ|| ಎ ಇಂದ್ರಾಣಿ ಅವರು ಅನ್ನಮಯ್ಯನ ಆದ್ಯಾತ್ಮ ತತ್ವವನ್ನೂ, ಕೆ ನಂದನ್ ಅನ್ನಮಯ್ಯನ ಜಾನಪದ ವರಸೆಯನ್ನು ುರಿತೂ ಮಾತನಾಡಿದರು ನಂತರ ಶ್ರೀಮತಿ ಎಸ್ ಸಿ ಶ್ರೀದೇವಿ ಅನ್ನಮಾಚಾರ್ಯ ಸಂಕೀ ರ್ತನೆಗಳನ್ನು ಆಲಾಪಿಸಿದರು ಅಂದು ಸಂಜೆ ಶ್ರೀಮತಿ ಶಿಷ್ಪಾ ವಸುಂದರಾದೇವಿ, ನಂತರ ಶ್ರೀ ಕುಲ್ಲಿಕ್ ಅವರುಗಳ ಸಂಗೀತ ನಡೆಯಿತು

4 4--92 ರಂದು ಬೆಳಗ್ಗೆ ಆಚಾರ್ಯ ಎಂ ಸಂಗಮೇಶಂ ಅನ್ನಮಾಚಾರ್ಯರ ಶೃಂಗಾರ ಸಂಕೀ ರ್ತನೆಗಳ ಆಧ್ಯಾತ್ಮಿಕತೆಯನ್ನೂ, ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅನ್ನಮಾಚಾರ್ಯ ಸಂಕೀರ್ತನೆ ಗಳ ವೇದಾಂತ ದೋರಣೆಯನ್ನೂ ವಿವರಿಸಿದರು ನಂತರ ಪ್ರಾಜೆಕ್ಟ್ ಕಲಾವಿದೆ ಕುಮಾರಿ ಜಂದ್ಯಾಲ ಕೃಷ್ಣಕುಮಾರಿ ಅವರಿಂದ ಅನ್ನಮಾಚಾರ್ಯ ಜೀವಿ ತಚರಿತ್ರೆ ಹರಿಕಥೆ ನಡೆಯಿತು ಅಂದು ಸಂಜೆ ಶ್ರೀಮತಿ ಕೆ ಸರಸ್ವತಿ ವಾಸುದೇವನ್ ವೀಣಾವಾ ದನ ನಂತರ ಶ್ರೀಮತಿ ಶೋಬಾರಾಜು ಅವರಿಂದ ಅನ್ನಮಾಚಾರ್ಯ ಸಂಕೀರ್ತನ ಗಾಯನವಾದವು.

5 -4--92 ರಂದು ಬೆಳಗ್ಗೆ ಶ್ರೀ ಗೋವಿಂದ ರಾಜಸ್ವಾಮಿ ಆಸ್ಥಾನ ಪ್ರಾಜೆಕ್ಟ್ ಕಲಾವಿದರಿಂದ ಸಂಕೀರ್ತನ ಪೂಜೆ ನಂತರ ಶ್ರೀಮತಿ ಜಿ ರಾದ ಹಾಗೂ ಚಿ|| ಜಿ ಅನಿಲ್ ಅವರಿಂದ ಗಾತ್ರಕಚೇರಿ ನಂತರ ಶ್ರೀ ಎ ಎನ್ ಮೂರ್ತಿ ಅವರು ಅನ್ನ ಮಾಚಾರ್ಯರು ನೀಡಿದ ಸಾಮಾಜಿಕ ಸಂದೇಶ ವನ್ನು ಕುರಿತು ಮಾತನಾಡಿದರು ಶ್ರೀಮತಿ ಪಟ್ಟು ರಾಜ ಗೋಪಾಲನ್ ಅವರಿಂದ ಗಾತ್ರಕಚೇರಿ ನಡೆ ಯಿತು

ಅಂದು ಸಂಜೆ ಉತ್ಸವ ಸಮಾರೂಪ ಡಾ|| ಕೆ ಸರ್ವೋತ್ತಮರಾವ್ ಅದ್ಯಕ್ಷತೆಯಲ್ಲಿ ನಡೆ ಯಿತು ಅನ್ನಮಾಚಾರ್ಯರ ಕೀರ್ತನಗಳಲ್ಲಿ ಸ್ವಾಮಿಯ ಸೇವೆಯಲ್ಲಿನ ಹೊಸತನವನ್ನು ಕುರಿತು ಅವರು ವಿವರಿಸಿದರು ಮುಖ್ಯ ಅತಿದಿಗಳಾಗಿ ಶ್ರೀ ಕೆ ರಾಮಚಂದ್ರರಾವ್ ಅವರು ಬಗವತ್ಸೇ ವಗೆ ಸಂಕೀರ್ತನ ಮಾರ್ಗ ಸುಲಬವೆಂದು ಅನ್ನಮಾ ಚಾರ್ಯರ ಜೀವನವನ್ನು ವಿವರಿಸಿದರು ನಂತರ ಅನ್ನಮಾಚಾರ್ಯ ಸಂಕೀರ್ತನ ಗಾಯನ ಸ್ಪರ್ದೆಯ ಬಹುಮಾನ ವಿತರಣೆ ನಡೆಯಿತು ಶ್ರೀ ಜಿ ಬಾಲಕೃ ಷ್ಣಪ್ರಸಾದ್ ಅವರು ಅನ್ನಮಾಚಾರ್ಯರ ಸಂಕೀರ್ತ ನೆಗಳನ್ನು ಹಾಡಿ ರಂಜಿಸಿದರು ಶ್ರೀಮತಿ ಉಮಾ ರಾಮಾರಾವ್ ಅವರು ಅನ್ನಮಾಚಾರ್ಯರ ಕೀರ್ತ ನೆಗಳ ಆದಾರದಲ್ಲಿ ಅಲಮೇಲು ಮಂಗ ವಿಲಾಸಂ ಎಂಬ ನೃತ್ಯರೂಪಕವನ್ನು ನೀಡಿದರು

***

## ತಿ ತಿ ದೇ ದರ್ಮಕರ್ತರ ಮಂಡಳಿಯ ನಿರ್ಣಯಗಳು

* ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ವಜ್ರಕಿರೀಟವನ್ನು ಐದು ತಿಂಗಳಿನೊಳಗೆ ತಯಾರು ಮಾಡಬೇಕೆಂದು ನಿರ್ಣಯಿಸಲಾಗಿದೆ ಇದಕ್ಕಾಗಿ ಒಂದು ಕೋಟಿ ರೂಗಳ ವೆಚ್ಚವಾಗಬಹುದೆಂದು ಅಂದಾಜು ಮಾಡಲಾಗಿದೆ

* ತಿರುಪತಿಯ ಬರ್ಡ್ (ಬಾಲಾಜಿ ವಿಕಲಾಂಗ ಚಿಕಿತ್ಸಾ ಪುನರಾವಾಸ ಕೇಂದ್ರ) ಗಾಗಿ ಹೊಸ ಬವನ ನಿರ್ಮಾಣವಾಗಬೇಕೆಂದೂ, ಅದರಲ್ಲಿಯೇ 35 ಲಕ್ಷ ರೂಗಳ ವೆಚ್ಚದಲ್ಲಿ ವಿಕಲಾಂಗರ ಜೊತೆಗೆ ಬರುವ ಸಹಾಯಕರ ವಸತಿಗಾಗಿ ಬವನ ನಿರ್ಮಾಣ ವಾಗಬೇಕೆಂದೂ ತೀರ್ಮಾನಿಸಲಾಗಿದೆ

* ದರ್ಮಪ್ರಚಾರ ಪರಿಷತ್ ನೇತೃತ್ವದಲ್ಲಿ ನಡೆಯುತ್ತಿರುವ ತೆಲುಗಿನ ಪುರಾಣ ಪ್ರವೋದ, ಪರೀಕ್ಷೆಗಳನ್ನು ಕನ್ನಡ, ತಮಿಳು, ಹಿಂದಿಗಳಲ್ಲೂ ನಡೆಸಬೇಕೆಂದು ತೀರ್ಮಾನಿಸಲಾಗಿದೆ

* ತಿರುಪತಿ ಪಟ್ಟಣದ ರಸ್ತೆಗಳಲ್ಲಿ ಮೂರು ತೋರಣಗಳನ್ನು ನಿರ್ಮಿಸಬೇಕೆಂದು -- ಅವುಗಳಲ್ಲಿ ಒಂದು ಅಲಿಪಿರಿಯ ಬಳಿಸುರಸ್ತೆಯಲ್ಲೂ ಮಿಕ್ಕೆರಡು ಅದ್ಯಕ್ಷರು ಹಾಗೂ ಕಾರ್ಯನಿರ್ವಹಣಾದಿಕಾರಿಗಳು ಜೊತೆಗೂಡಿ ನಿರ್ಣಯಿಸುವ ಎಡೆಗಳಲ್ಲೂ ನಿರ್ಮಿಸಲಾಗುವುದು ಮದರಾಸಿಗೆ ಹೋಗುವಾಗ ದೊರೆಯುವ ರೈಲ್ವೆ ಓವರ್ ಬ್ರಿಡ್ಜ್ ಬಳಿಯ ಸಾರಿಗೆ ಸುರುಳಿಗಳಲ್ಲಿ ಗರುಡ, ಹನುಮಂತ ವಿಗ್ರಹಗಳನ್ನು ಸ್ಥಾಪಿಸಲು ತೀರ್ಮಾನಿಸಲಾಗಿದೆ

* ವೇದ ಪಾಠಶಾಲೆಗಳಲ್ಲಿ ವೇದಗಳನ್ನು ಅದ್ಯಯನ ಮಾಡು ವ ವಿದ್ಯಾರ್ಥಿಗಳಿಗೆ 50 ಶತಾಂಶ ಬೋರ್ಡಿಂಗ್ ಭತ್ಯವನ್ನೂ ಉಪಾದ್ಯಾಯರಿಗೆ 50 ಶತಾಂಶ ಸಂಬಳವನ್ನೂ ತಿ ತಿ ದೇ ನೀಡಬೇಕೆಂದೂ ಪ್ರಸ್ತುತ 4 ವೇದ ಪಾಠಶಾಲೆಗಳನ್ನು ಈ ಯೋಜನೆಯಲ್ಲಿ ಸೇರಿಸಬೇಕೆಂದೂ ತೀರ್ಮಾನಿಸಲಾಯಿತು

* 1992 ರ ಸೆಪ್ಟಂಬರಿನಲ್ಲಿ ಮೂರುದಿನಗಳ ಕಾಲ ತಿರುಮಲೆಯಲ್ಲಿ ಸಂಗೀತೋತ್ಸವಗಳನ್ನು ನಡೆಸಬೇಕೆಂದೂ, ಲತಾಮಂಗೇಷ್ಕರ್, ಎಂ ಎಸ್ ಸುಬ್ಬುಲಕ್ಷ್ಮಿ ಆಶಾಭೋಸ್ಲೆ -- ಮೊದಲಾದವರನ್ನು ಆಹ್ವಾನಿಸಬೇಕೆಂದೂ ತೀರ್ಮಾನಿಸಲಾಯಿತು

ಈ ವಿವರಗಳನ್ನು ತಿ ತಿ ದೇ ಅದ್ಯಕ್ಷರು ಶ್ರೀ ಸುಬ್ಬರಾಮಿರೆಡ್ಡಿ ಅವರು ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡುತ್ತ ನೀಡಿದ್ದಾರೆ

***

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಜುಲೈ 1992

**ರಾಮಾಯಣಗಳಲ್ಲಿ ಶ್ರೀರಾಮ**

- ಡಾ|| ಆರ್ ರಾಮಕೃಷ್ಣ

**ಯಾಮುನರ ಸ್ತೋತ್ರರತ್ನ**

-ಡಾ|| ವಿ ಎಸ್ ಸಂಪತ್ಕುಮಾರಾಚಾರ್ಯ

**ನಾಧದ್ವಾರ**

--ಸಿ ಗೋವಿಂದಾಚಾರ್ಯ

**ತುಂಬಿದಕೊಡ**

-ಬಿ ನ ಗುಂಡೂರಾವ್

**ಅನುಭವಗಮ್ಯ**

--ಸಂತ ಹರಿಹರಾನಂದ ಸರಸ್ವತೀ

ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಲೇಖನಗಳೊಂದಿಗೆ ಹೊರಬರಲಿದೆ ತಮ್ಮ ಸಂಚಿಕೆಯನ್ನು ಇಂದೇ ಕಾದಿರಿಸಿ

**ಬಿಡಿ ಪ್ರತಿ ರೂ 1/- ಮಾತ್ರ ವಾರ್ಷಿಕ ಚಂದಾ ರೂ 12/- ಮಾತ್ರ.**

***************************************

### ಮನವಿ

ಕಾರಣಾಂತರಗಳಿಂದ ಸಪ್ತಗಿರಿ ಸಕಾಲದಲ್ಲಿ ಬಿಡುಗಡೆಯಾಗುತ್ತಿಲ್ಲ ಮುಂದಿನ ಸಂಚಿಕೆಗಳನ್ನು ಶೀಘ್ರದಲ್ಲಿ ಬಿಡುಗಡೆ ಮಾಡಲಾಗುತ್ತದೆ ಓದುಗರು ಏಜಂಟರು ಸಹಕರಿಸಬೇಕೆಂದು ವಿನಂತಿ

-ಸಂಪಾದಕರು

***************************************

# ತಿಂಗಳಿನ ಮುಖ್ಯದಿನಗಳು

## ಜುಲೈ 1992

| | |
|---|---|
| 6 ಸೋಮವಾರ | ಶ್ರೀನಿವಾಸ ಮಂಗಾಪುರದಲ್ಲಿ ಶ್ರೀ ಕಲ್ಯಾಣ ವೇಂಕಟೇಶ್ವರಸ್ವಾಮಿ ಸಾಕ್ಷಾತ್ಕಾರ ವೈಭವ |
| 9 ಗುರುವಾರ | ಪೆರಿಯಾಳ್ವಾರರ ಶಾತ್ತುಮೊರೆ |
| 11 ಶನಿವಾರ | ಶ್ರೀ ನಾದಮುನಿಗಳ ವರ್ಷತಿರುನಕ್ಷತ್ರ |
| 14 ಮಂಗಳವಾರ | ವ್ಯಾಸ ಪೂಜೆ |
| 16 ಗುರುವಾರ | ದಕ್ಷಿಣಾಯನಾರಂಬ<br>ತಿರುಮಲೆಯಲ್ಲಿ ಆನಿವರ ಆಸ್ಥಾನ |
| 23 ಗುರುವಾರ | ಆಂಡಾಳ್ ತಿರುವಾಡಿಪ್ಪೂರಂ ಉತ್ಸವಾರಂಬ |

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ದರ್ಶನ ಹಾಗೂ ಸೇವಾ ವಿವಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ ೫ ೦೦ | ಪ್ರಾ ೫ ೩೦ |
| ವಿಶ್ವರೂಪ ಸರ್ವದರ್ಶನ* | ಪ್ರಾ ೫ ೩೦ | ಪ್ರಾ ೭ ೦೦ |
| ತೋಮಾಲ ಸೇವೆ | ಪ್ರಾ ೭ ೩೦ | ಪ್ರಾ ೮ ೦೦ |
| (ಆರ್ಜಿತ) ಅರ್ಚನೆ | ಪ್ರಾ ೮ ೦೦ | ಪ್ರಾ ೮ ೩೦ |
| (ಆರ್ಜಿತ) ಸರ್ವದರ್ಶನ | ಪ್ರಾ ೯ ೦೦ | ಮ ೧೨ ೩೦ |
| | ಮ ೧ ೦೦ | ಸಂ ೬ ೦೦ |
| | ರಾ ೭ ೦೦ | ರಾ ೮ ೪೫ |
| ಏಕಾಂತಸೇವೆ | | ರಾ ೯ ೦೦ಕ್ಕೆ |

* ಶುಕ್ರವಾರ ಏಕಾದಶಿ ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫ ೩೦ ರಿಂದ ಪ್ರಾ ೬ ೩೦ ರ ವರೆಗೆ ಮಾತ್ರ

## ಆರ್ಜಿತ ಸೇವೆಗಳು

| | | |
|---|---|---|
| ೧ | ಗರುಡವಾಹನ | ೩೨ ೦೦ |
| ೨ | ಚಂದ್ರಪ್ರಭ ವಾಹನ | ೩೨ ೦೦ |
| ೩ | ಗಜವಾಹನ | ೩೨ ೦೦ |
| ೪ | ಅಶ್ವವಾಹನ | ೩೨ ೦೦ |
| ೫ | ಸಿಂಹವಾಹನ | ೩೨ ೦೦ |
| ೬. | ಹಂಸವಾಹನ | ೩೨ ೦೦ |
| ೭ | ಚಿಕ್ಕಶೇಷವಾಹನ | ೩೨ ೦೦ |
| ೮ | ದೊಡ್ಡ ಶೇಷವಾಹನ | ೬೨ ೦೦ |
| ೯ | ಸೂರ್ಯಪ್ರಭವಾಹನ | ೬೨ ೦೦ |

## ಪಡಿಪ್ರಸಾದಗಳು

| | | |
|---|---|---|
| ೧ | ದೋಸೆ ಕಾಲಸೋಲ | ೩೫ ೦೦ |
| ೨ | ದಧ್ಯೋದನ | ೪೦ ೦೦ |
| ೩ | ಪುಳಿಯೋಗರೆ | ೫೦ ೦೦ |
| ೪ | ಪೊಂಗಲು " | ೫೫ ೦೦ |
| ೫ | ಸಕ್ಕರೆಪೊಂಗಲ್ " | ೬೫ ೦೦ |
| ೬ | ಶಾಕರ ಭಾತ್ | ೮೫ ೦೦ |
| ೭ | ಕೇಸರಿಭಾತ್ | ೯೦ ೦೦ |
| ೮ | ಸೀರ | ೧೫೫ ೦೦ |

ವಿವರಗಳಿಗೆ

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ

ತಿರುಪತಿ

Edited and Published on behalf of the T T Devasthanams by K. Subba Rao M.A. and printed at T T D Press by M. Vijayakumar Reddy Manager T T D. Press, Tirupati 517 507

